# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ-೬ ಜೂನ್, ೧೯೮೫

## ಶ್ರೀ ಸಿದ್ಧಗಂಗಾ ಸುಪ್ರಭಾತ

ಮೆರೆವ ಜಂಗಮ ಜ್ಯೋತಿ ಶಿವಕುಮಾರಯತಿ
ಕರುನಾಡ ಸತ್ಕೀರ್ತಿ, ಭಾರತ ವಿಭೂತಿ।
ಸರುವ ಜೀವಾತ್ಮರಿಗೆ ಲೇಸನೆಸಗುವ ಪ್ರೀತಿ
ತಿರು ಸಿದ್ಧಗಂಗೆಯಾ ಪಂಚಾರತಿ॥

* * *

ನಿನ್ನ ಮುನ್ನಿನ ಮಹಿಮೆ ತಪವಾಂತು ಪಡೆಯೆ ಈ
ಪೂರ್ಣ ಶಿವಯೋಗಿಯನು ಬೆಳಕಾಯಿತು।
ಧನ್ಯ ನೀ, ಧನ್ಯ ನೀ ಸಿದ್ಧಗಂಗಾ ಶ್ರೀಯೆ
ಇನ್ನೇಕೆ ನಿದ್ರೆ? ತೊರೆ ಬೆಳಗಾಯಿತು॥

* * *

ಸಿದ್ಧಿ ಶ್ರೀಗಿರಿಯೇರಿ ಬಿದ್ದವರ ಉದ್ಧರಿಸಿ
ವಿದ್ಯೆಯ ಪ್ರಸಾರಕ್ಕೆ ಲಕ್ಷಮುಖ ನೀಡಿ।
ಇದ್ದ ಕಾರ್ಯಕ್ಷೇತ್ರ ನೂರುಮಡಿ ವಿಸ್ತರಿಸಿ
ಸದ್ಧರ್ಮ ಸಾಧವನು ಸೂರೆಮಾಡಿ॥

—ಡಾ॥ ಸಿದ್ಧಯ್ಯ ಪುರಾಣಿಕ

# ಸಿದ್ಧಗಂಗಾಂತರಂಗ



ಗಮನಿಸಿ :

'ಟೈಟಾನಿಯಂ ಲೇಖನದ 42 ನೇ ಪುಟದ ಮುಂದುವರಿದ ಲೇಖನ 47 ರಲ್ಲಿ ಮುದ್ರಣವಾಗಿದೆ.





# ಶ್ರೀವಾಣಿ

ಶಾಲಾ ಕಾಲೇಜುಗಳು ಆರಂಭವಾಗಿವೆ. ಪಾಠಪ್ರವಚನಗಳೂ ಆರಂಭಗೊಂಡಿವೆ. ವಿದ್ಯಾರ್ಥಿಗಳು ಸಕ್ರಿಯವಾಗಿ ಅಭ್ಯಾಸದಲ್ಲಿ ತೊಡಗಬೇಕಾಗಿದೆ. ಪ್ರಾರಂಭದಲ್ಲಿ ಉದಾಸೀನ, ವೃಥಾಕಾಲಹರಣ ಮಾಡುವುದು ವಿದ್ಯಾರ್ಥಿಗಳ ಪ್ರವೃತ್ತಿಯಾಗಿದೆ. ವ್ಯಕ್ತಿಯ ಬದುಕಿನಲ್ಲಿ ಕಾಲ ಅಮೂಲ್ಯವಾದುದು, ಅದು ಅಪವ್ಯಯವಾಗಬಾರದು. ಒಂದು ಕಥೆ ನೆನಪಿಗೆ ಬರುತ್ತದೆ, ಒಬ್ಬ ಮಹಾರಾಜ ಪ್ರಯಾಣ ಮಾಡುತ್ತಿದ್ದ. ಮಾರ್ಗ ಮಧ್ಯದಲ್ಲಿ ರೈತನೊಬ್ಬ ಸಸಿನೆಡುತ್ತಿದ್ದ. ಮಹಾರಾಜ ರೈತನನ್ನು ಪ್ರಶ್ನೆ ಮಾಡಿದ. "ನಿನ್ನ ವಯಸ್ಸೆಷ್ಟು? ಎಂದು. "ನಾಲ್ಕು ವರ್ಷ" ಎಂದ ರೈತ. ಪಕ್ಕದಲ್ಲಿದ್ದವರು, ನಿನ್ನನ್ನು ಪ್ರಶ್ನೆ ಮಾಡಿದವರು ಮಹಾರಾಜರು; ನಿನ್ನ ನಿಜವಾದ ವಯಸ್ಸನ್ನು ಹೇಳು ? ಎಂದರು. ಇಲ್ಲಸ್ವಾಮಿ ನನ್ನ ನಿಜವಾದ ವಯಸ್ಸನ್ನೇ ಹೇಳಿದ್ದೇನೆ, ಎಂದನು. ಅಲ್ಲಪ್ಪ ನಿನಗೆ ಈಗ ಎಂಭತ್ತು ವರ್ಷ ವಯಸ್ಸಾಗಿರಬೇಕು. ಊರುಹೋಗು ಕಾಡುಬಾ ಎನ್ನುತ್ತಿದೆ ನೀನು ಹೇಳುವುದನ್ನ ನೋಡಿದರೆ ನಮಗೆ ಆಶ್ಚರ್ಯವಾಗುತ್ತಿದೆ. ನಿನಗೆ ಹೇಗೆ ನಾಲ್ಕುವರ್ಷ ? ಆಗ ರೈತ ಹೇಳಿದ "ಸ್ವಾಮಿ, ಈ ಮನುಷ್ಯ ಅನ್ನುವ ಈ ದೇಹ ಹುಟ್ಟಿ ಇಲ್ಲಿಗೆ ಎಪ್ಪತ್ತೆರಡು ವರ್ಷಗಳಾದವು. ಈ ಆಯುಷ್ಯದಲ್ಲಿ ಬಹಳಷ್ಟು ಭಾಗ ನಿದ್ರೆಯಲ್ಲಿ ಕಳೆದೆ. ಸ್ವಲ್ಪಭಾಗ ಬಾಲ್ಯದಲ್ಲಿ ಕಳೆದುಹೋಯಿತು. ವಯಸ್ಸಾದ ಮೇಲೆ ಮದುವೆ, ಮಕ್ಕಳು ಸಂಸಾರ ಆಸ್ತಿ ಹಣ ಎಂದು ಉಳಿದ ಭಾಗವೂ ಕಳೆದುಹೋಯಿತು. ಮನುಷ್ಯ ಅಂದರೆ ? ಮನುಷ್ಯನಾಗಿ ಹುಟ್ಟಿದ ಮೇಲೆ ಹೇಗೆ ಅರಿತು ಬಾಳಬೇಕು ಎಂಬ ತಿಳುವಳಿಕೆಯೇ ಹುಟ್ಟಲಿಲ್ಲ ಮನುಷ್ಯತ್ವದ ಅರಿವು ಮೂಡಿ ಈಗ್ಗೆ ನಾಲ್ಕುವರ್ಷವಾಯಿತು. ಅಂದಿನಿಂದ ನಾನು ನಿಜವಾದ ಮನುಷ್ಯತ್ವ ಸಂಪಾದನೆಗೆ ದುಡಿಯುತ್ತಿದ್ದೇನೆ. ಅರಿವರಿತು ಬಾಳುತ್ತಿದ್ದೇನೆ. ನಿಮಿಷ ನಿಮಿಷಾರ್ಧವನ್ನೂ ವ್ಯರ್ಥವಾಗಿ ಕಳೆಯದೆ ಬದುಕಲು ಪ್ರಯತ್ನಿಸುತ್ತಿದ್ದೇನೆ. ಆ ನಾಲ್ಕುವರ್ಷಗಳೇ ನನ್ನ ನಿಜವಾದ ಆಯುಸ್ಸು. ನನ್ನ ತಿಳುವಳಿಕೆಯಲ್ಲಿ ತಪ್ಪಿದ್ದರೆ ಕ್ಷಮಿಸಬೇಕು" ಎಂದು ಹೇಳಿ ವಿನಮ್ರನಾಗಿ ನಿಂತುಕೊಂಡ. ಮಹಾರಾಜನಿಗೆ ಸಂತೋಷವಾಯಿತು. ಆ ರೈತನಿಗೆ ನಮಸ್ಕರಿಸಿ ಮುಂದೆ ಹೋದ. ಆದ್ದರಿಂದ ವಿದ್ಯಾರ್ಥಿಯಾಗಲೀ, ರೈತನಾಗಲೀ, ಯಾರೇ ಆಗಲೀ ತಮಗೆ ದೊರಕಿದ ಕಾಲವನ್ನು ಸದುಪಯೋಗ ಮಾಡಿಕೊಂಡು ಸಾರ್ಥಕವಾದ ಸಾಧನೆಯನ್ನು ಮಾಡಬೇಕು. ಆಗಲೇ ಬದುಕಿಗೆ ಬೆಲೆ. ಇಲ್ಲದಿದ್ದರೆ ಬದುಕು ಬರಡಾಗುತ್ತದೆ.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ|| ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಪಿ. ಎಸ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

23-6-85 ಭಾನುವಾರ ಮುಂಜಾನೆ ಏರ್ ಇಂಡಿಯಾದ ಜೆಂಬೋ ಜೆಟ್ ವಿಮಾನ ಅಟ್ಲಾಂಟಿಕ್ ಸಾಗರದೊಳಗೆ ಬಿದ್ದ ಸುದ್ದಿ. ಪತ್ರಿಕೆಗಳ ಮುಖ ಪುಟದ ತುಂಬ ಅದರ ವಿವರ. 325 ಸಾವು. ಗಗನದಲ್ಲೇ ಸ್ಫೋಟ; ಬಾಂಬು ಕಾರಣ. ಇತಿಹಾಸದಲ್ಲೇ ಬಹು ದೊಡ್ಡ ದುರಂತ. ಹೃದಯ ಸ್ಥಗಿತವಾಗುವಂಥ ಸುದ್ದಿ; ಮಾನವೀಯತೆಗೊಂದು ಕಳಂಕ. ಅಮಾಯಕರ ಪ್ರಾಣಹರಣ, ಕಿಡಿಗೇಡಿಗಳ ವಿಧ್ವಂಸಕ ಕೃತ್ಯ. ಸತ್ತವರ ಸಮೂಹದಲ್ಲಿ ಹಸುಗೂಸುಗಳು, ಏನೂ ಅರಿಯದ ಮುಗ್ಧ ಮೊಗ್ಗುಗಳು. ಅರಳುವ ಮೊದಲೇ ಕಣ್ಮುಚ್ಚಿದ ಕರುಳು ಹಿಂಡುವ ಪ್ರಸಂಗ. ಲೋಕ ವಿಖ್ಯಾತ ವಿಜ್ಞಾನಿ ಡಾ|| ನಾಯಿಡಮ್ಮನವರೂ ಸಾವನ್ನಪ್ಪಿದವರಲ್ಲಿ ಒಬ್ಬರು. ಶ್ರೀಯುತರು ಜವಹರ್ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದವರು. ಶ್ರೇಷ್ಠ ವಿಜ್ಞಾನಿ. ಒಬ್ಬ ವಿಜ್ಞಾನಿ, ಒಬ್ಬ ಕಲಾವಿದ, ಒಬ್ಬ ಕವಿ, ಒಂದು ರಾಷ್ಟ್ರದ ಸಂಪತ್ತು. ಅಂಥವರ ಸಾವಿನಿಂದ ರಾಷ್ಟ್ರ ಬಡವಾಗುತ್ತದೆ. ಡಾ|| ನಾಯಿಡಮ್ಮ ಅವರ ಸಾವೂ ರಾಷ್ಟ್ರವನ್ನು ಬಡವಾಗಿಸಿದೆ. ಇದಕ್ಕೆಲ್ಲ ಕಾರಣ ಮಾನವತ್ವದ ಗಂಧಗಾಳಿ ತಿಳಿಯದ ಹುಂಬತನ. ರಾಕ್ಷಸೀ ಸ್ವಭಾವದ ಪೈಶಾಚಿಕ ಕೃತ್ಯ. ಅಪಘಾತಕ್ಕೆ ಕಾರಣರಾದವರು ಉಗ್ರಗಾಮಿಗಳು. ಮಾನವರಲ್ಲಿ ಅವರು ಪಶುಗಳೂ ಅಲ್ಲ; ಮಾನವ ದೇಹ ಹೊತ್ತ ಮೃಗಗಳು, ಜಾತಿ ಮೌಢ್ಯ ಕವಿದ ಹೃದಯ ವಿಹೀನ ಮೃಗಗಳು. ಇದು ಧರ್ಮ ಹೇಳುವಂಥದಲ್ಲ. ಧರ್ಮ ಎಂದೂ ವಿನಾಶಕಾರಿಯಲ್ಲ. ಧರ್ಮದ ಸ್ಪಷ್ಟ ತಿಳುವಳಿಕೆಯಿಲ್ಲದ, ಮತ ಭ್ರಾಂತಿ ಮತಿಗೇಡಿಗಳು ಮಾಡುವ ಅಕ್ಷಮ್ಯ ಅಪರಾಧ. ಎಷ್ಟು ಬರೆದರೇನು? ಏನು ಬರೆದರೇನು? ಸತ್ತ 325 ಅಮೂಲ್ಯ ಜೀವಗಳು ಮತ್ತೆ ಬರಲಾರವು. ಹಾಗೆಂದ ಮಾತ್ರಕ್ಕೆ ವಿಧ್ವಂಸಕರ ಕೃತ್ಯ ಸರಿಯೆಂದಲ್ಲ. ಖಂಡನಾರ್ಹವಾದುದೆಂಬಲ್ಲಿ ಹೃದಯವಿದ್ದವರೆಲ್ಲ ಒಪ್ಪುವಂಥ ನಿರ್ಣಯ. ಸಂಬಂಧಪಟ್ಟವರೆಲ್ಲ ಜಾಗೃತರಾಗಬೇಕು. ಅಪರಾಧಿಗಳ ಶೋಧ ನಡೆಯಲಿ, ಶಿಕ್ಷೆಯಾಗಲಿ. ಇಂಥ ದುರ್ಘಟನೆ ಮತ್ತೆಂದೂ ಮರುಕಳಿಸದಿರಲಿ. ಸತ್ತವರ ಆತ್ಮಗಳಿಗೆಲ್ಲ ಶಾಂತಿ ದೊರೆಯಲಿ.

# ಮಾಣಿಕ್ಯ ದೀಪ್ತಿ–8

ವಿದ್ವಾನ್ ಎಸ್. ಷಡಕ್ಷರಿ
ಅಧ್ಯಾಪಕರು, ಸಂಸ್ಕೃತ ಕಾಲೇಜು. ಸಿದ್ಧಗಂಗಾ ಮಠ.

**ಕಾಯಕದ ಮಹತ್ವ :**

ಯಾವುದಾದರೊಂದು ಉದ್ಯೋಗದಲ್ಲಿ ಅಥವಾ ಕಾಯಕದಲ್ಲಿ ತೊಡಗದ ವ್ಯಕ್ತಿಯ ಜೀವನ ಹಾಳು ದೇಗುಲವಿದ್ದಂತೆ ನಿರರ್ಥಕ. ಕಾಯಕ ನಿರತನಾಗದವ್ಯಕ್ತಿಯು ನಾಶವಾಗುದಲ್ಲದೆ ಇವನಿಂದ ಕುಟುಂಬ, ಸಮಾಜ, ಕೊನೆಗೆ ರಾಷ್ಟ್ರವೂ ಹಾಳಾಗಿ ಹೋಗುತ್ತದೆ. ವ್ಯಕ್ತಿಯ ಬಾಳು ಹಾಳಾಗುವುದಲ್ಲದೆ, ಅವನಲ್ಲಿ ತಾಳ್ಮೆ ಕಡಿಮೆಯಾಗಿ ಜೀವನವೆಲ್ಲವೂ ಕೆಸರಿನಲ್ಲಿ ಬಿದ್ದ ಪಶುವಿನಂತೆ ಅನರ್ಥಕ್ಕೀಡಾಗುತ್ತದೆ. "ಕಾಯಕವಳಿದ ಠಾವಿನಲ್ಲಿ ಜೀವನದ ಸುಳಿವುಂಟೆ ?" ಎಂಬ ಶರಣರ ಮಾತು ಇದೇ ಅಭಿಪ್ರಾಯವನ್ನು ಸಾರುತ್ತಿದೆ. ಆದ್ದರಿಂದ ಯಾವುದೇ ಒಬ್ಬ ವ್ಯಕ್ತಿ ಜೀವನವನ್ನು ಪರಿಶುದ್ಧಗೊಳಿಸಿ ಕೊಳ್ಳಲು ಕಾಯಕವು ಮಹತ್ತರವಾದ ಸಾಧನ. ಕಾಯಕ    ಕಾಯಕವು ಕರ್ಮಭೂಮಿ ಅಥವಾ ಭಾವ ಭೂಮಿಯ ಮೇಲೆ ಸುಮಧುರ ಫಲಗಳನ್ನು ನೀಡುತ್ತದೆ. ನೇಮ ನಿಷ್ಠೆಯುಳ್ಳ ತನ್ನ ಕಾಯಕದಿಂದ ವ್ಯಕ್ತಿಯು ಯಾವುದೇ ವ್ಯಾಮೋಹಕ್ಕೆ ಒಳಗಾಗಲಾರ. ಇದರಿಂದ ಅವನ ಬಾಳ ಕಾರ್ಗತ್ತಲು ದೂರ ಸರಿಯುತ್ತದೆ. ಚಿತ್ತ ಮತ್ತು ಭಾವಗಳು ಶುದ್ಧಿಯಾಗುತ್ತವೆ. ಬೌದ್ಧಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ತೊಡಗಲು ಅನುವಾಗುತ್ತಾನೆ ಈ ಕಾಯಕದಿಂದ ಶಾರೀರಿಕ ಅವಗುಣಗಳು ನಷ್ಟವಾಗಿ ಬುದ್ಧಿ-ಭಾವಗಳು ಪುಷ್ಟಿಗೊಂಡು, ಜೀವನದಲ್ಲಾಗಲೀ. ವ್ಯವಹಾರದಲ್ಲಾಗಲೀ ಬರುವ ಕಷ್ಟಗಳು ದೂರವಾಗಿ ಆತ್ಮ ಪ್ರಗತಿಗೆ ರಹದಾರಿಯಾಗುತ್ತದೆ. ಸತ್ಯ–ಪ್ರಾಮಾಣಿಕತೆಯು ಮೈಗೂಡಿ ಜೀವನದಲ್ಲಿ ಮುಕ್ತಿ ಸಿಗುತ್ತದೆ, ಎಂಬುದಕ್ಕೆ ಅನೇಕ ಸಾಧಕರ, ಸಿದ್ಧಪುರುಷರ ನಿದರ್ಶನಗಳುಂಟು

ಅಂದ ಮಾತ್ರಕ್ಕೆ ಎಲ್ಲರಿಗೂ ಒಂದೇ ರೀತಿಯ ಕಾಯಕವಿರಬೇಕೆಂಬ ನಿಯಮವಿಲ್ಲ. ಎಲ್ಲರೂ ನಿರುದ್ಯೋಗಿಗಳಾಗದೆ ಏನಾದರೊಂದು ಜೀವನ ಸಾಗಿಸುವ ಶುದ್ಧ ಕಾಯಕವನ್ನು ಮಾಡುತ್ತಾ ನಡೆದರೆ ಬಹುಶಃ ನಾಡಿನಲ್ಲಿ ಬಡತನ ಉದ್ಭವಿಸಲಾರದು. ರಾಷ್ಟ್ರದ ಆರ್ಥಿಕ ಭದ್ರತೆಯು ನೆಲೆಗೊಂಡೀತು. "ಉದ್ಯೋಗಿನಂ ಪುರುಷ ಸಿಂಹಮುಪೈತಿ ಲಕ್ಷ್ಮೀಃ" ಕಾಯಕನಿರತನಿಗೆ ಆಯುರಾರೋಗ್ಯ ಭಾಗ್ಯ ತಾನಾಗಿಯೇ ವೃದ್ಧಿಯಾಗುತ್ತವೆ.



ಕಾಯಕ ಕೇವಲ ನಾಟಕೀಯವಾಗಬಾರದು. ಇದರಲ್ಲಿ ಸ್ವಹಿತ-ಪರಹಿತಗಳೂ ಇರಬೇಕು. ಕಾಯಕನೆಂದೊಬುದೊಂದು ಪ್ರಾಯೋಗಿಕ ತಪಸ್ಸು. ಈ ತಪಸ್ಸಿನಲ್ಲಿ ತೊಡಗಿದವರಿಗೆ ಭವ ಬಂಧನಗಳು ದೂರವಾಗುತ್ತವೆ. ತನು ಮನಗಳು ಮಂಗಳಕರವಾಗುತ್ತವೆ. ಮಾನವನ ಆಂತರಿಕ ಮತ್ತು ಭೌತಿಕ ಸಂಪತ್ತು ಅಭಿವೃದ್ಧಿಯಾಗಿ ದೈವೀ ಶಕ್ತಿಯನ್ನು ಪಡೆಯಲು ಈ ಕಾಯಕವೇ ಕಲ್ಪತರು. ಇದು ಉತ್ತಮ ಸಂಸ್ಕೃತಿಯನ್ನು ಮತ್ತು ಚೈತನ್ಯವನ್ನು ಕೊಡುವ ಸೌಮ್ಯ ಸಾಗರ. ಎಲ್ಲ ರೀತಿಯ ದಾರಿದ್ರ್ಯವನ್ನು ಹೋಗಲಾಡಿಸುವ ಕಾಮಧೇನು. ಆದರೆ ನಾವು ಕೈಗೊಳ್ಳುವ ಕಾಯಕವು ಸರ್ವಾರ್ಥನೀಯವಾಗಿದ್ದು ಪಾವಿತ್ರತೆ ಮತ್ತು ಪ್ರಾಮಾಣಿಕತೆಗಳಿಂದ ಕೂಡಿದ್ದಾದರೆ ಸಮಾಜ ಶಕ್ತಿ ಬಲಿಯುತ್ತದೆ ರಾಷ್ಟ್ರಶಕ್ತಿ ಮತ್ತಷ್ಟು ಹೆಚ್ಚುತ್ತದೆ ಅನೇಕ ತಾಮಸೀಯ ಕೆಟ್ಟ ಚಟಗಳು ತಪ್ಪುತ್ತವೆ.

ಇಲ್ಲಿ ಮುಖ್ಯವಾಗಿ ಒಂದು ಮಾತನ್ನು ಹೇಳುವುದಾದರೆ ಗುರುವಾಗಲೀ, ಜಂಗಮನಾಗಲಿ, ರಾಜನಾಗಲಿ, ಫಕೀರನಾಗಲಿ, ಯಾವ ವರ್ಗದವರಾದರೂ, "ಕಾಯಕದಿಂದಲೇ ವೇಷದ ಪಾಶವು ಹರಿವುದು, ಕಾಯಕದಿಂದಲೇ ಶಿಲೆಯ ಕುಲ ಹರಿವುದು" ಎಂಬ ಶರಣರ ಎಚ್ಚರಿಕೆಯ ಮಾತನ್ನು ನಾವು ಮೈಗೂಡಿಸಿಕೊಂಡರೆ ಎಲ್ಲ ರೀತಿಯಲ್ಲೂ ಶುಭವಾದೀತು.

## ಬಸವಣ್ಣನವರನ್ನು ಕುರಿತು 'ಕುವೆಂಪು'

"ಒಂದು Social stand point ನಲ್ಲಿ ಬಸವೇಶ್ವರರಷ್ಟು ಅದ್ಭುತವಾಗಿ ಕೆಲಸ ಮಾಡಿದವರು ಯಾರೂ ಇಲ್ಲ, ಅಲ್ಲಿ ಬಸವೇಶ್ವರರು ಹೋದ ಮಟ್ಟಕ್ಕೆ ಈಗಲೂ ಬಂದಿಲ್ಲ ನಾವು, ಅವರು ಒಬ್ಬ ಬ್ರಾಹ್ಮಣಳಾದ ಹುಡುಗಿಯನ್ನು ಒಬ್ಬ ಹೊಲೆಯನಿಗೆ ಮದುವೆ ಮಾಡಿದ್ದಾರೆ, 800 ವರ್ಷಗಳ ಹಿಂದೆ. ಏನು, ಯಾವ ಧೈರ್ಯದಿಂದ ಮಾಡಿರಬೇಕು? ಏನು ಕೆಚ್ಚಿರಬೇಕು ನೋಡಿ! ಗೊತ್ತಾಯ್ತೇನು? ನಾವಿನ್ನೂ ಬಂದಿಲ್ಲ ಆ ಮಟ್ಟಕ್ಕೆ. ಬಸವೇಶ್ವರರ ಸಾಮಾಜಿಕ ಪರಿವರ್ತನೆಯನ್ನು ನಮ್ಮ ದೇಶ ಒಪ್ಪಿಕೊಂಡಿದ್ದ ಪಕ್ಷದಲ್ಲಿ ಅವಾಗ ಮುಸ್ಲಿಮರು, ಕ್ರಿಶ್ಚಿಯನ್ನರು ಎಲ್ಲಾ ಬರ್ತಿರಲಿಲ್ಲ ಇಲ್ಲಿಗೆ, ಬರ್ತಿರಲಿಲ್ಲ."

— ಕನ್ನಡಪ್ರಭ – ಡಿಸೆಂಬರ್ 25, 1983.

* * *

"ಬಸವ ಸಾಹಿತ್ಯ ಬಿಟ್ಟು ಉಳಿದ ಹಿಂದೂ ಸಾಹಿತ್ಯ ಸಾಹಿತ್ಯವಲ್ಲ"
ಬಿ. ಬಸಲಿಂಗಪ್ಪ, ಮಾಜಿ ಸಚಿವರು. [ಪ್ರಜಾವಾಣಿ - ಮೇ 22, 1984.]

* * *

# ದಿವ್ಯಸ್ವಪ್ನಸೃಷ್ಟಿ

## ಶಿವಶಾಸನ

ವಚನಸುಧಾ–೧

"ಕನ್ನಡ ಕವಿ ಕಾಳಿದಾಸ"
ಶ್ರೀ ಮೋಟಗಿ ಮಲ್ಲಿಕಾರ್ಜುನ,
ಅಥಣಿ

["ಕನ್ನಡ ಕವಿ ಕಾಳಿದಾಸ" ಕೃತ "ಬಸವತತ್ತ್ವರತ್ನಾಕರ" ವಚನಾಮೃತ ಅಪ್ರಕಟಿತ ಗ್ರಂಥದಿಂದ]

ಹರವಾದ ಎನ್ನೆದೆಯು ಲಿಖಿತ ಶಿವಶಾಸನ-
ಫಲಕವೆಂಬಂತೆ ಕಂಗೊಳಿಸಿತ್ತು ನೋಡಾ !

ಹರಹಿರ್ದ ರೋಮರಾಜಿ ಎದೆಯ ಹದವಪ್ಪ ಭೂಮಿ-
ಯೊಳು ನಾಟಿಕೆಗಳಾಗಿ ಕಿರಿಯ ಕೇಸರಿಯ-
ಸಸಿಯಂತೊಲೆಸೆಯುತಿರ್ದುವು ನೋಡಾ !

ಅಕ್ಷರಾಕೃತಿ–ಗೊಂಡು ನಾಟಿನಿಂದಿರ್ದೀ ರೋಮ ಸಸಿಗಳೆಲ್ಲ
ಅಕ್ಷಯವಹ ಶಿವತತ್ತ್ವರಹಸ್ಯ ಜ್ಞಾನ ಶ್ಲೋಕ-ವಚನ-
ಗೀತಂಗಳಾ ಲಿಪಿ ನಾಟಿಕಗಳಾಗಿ ರೂಪು–
ಗೊಂಡು ರಾಜಿಸುತಿರ್ದುವು ನೋಡಾ !

ಇಂತು ಬಸವತತ್ತ್ವರತ್ನರಾಶಿ ಸೂರೆಗೊಂಡಿರಲೆನ್ನೆದೆಯ-
ಭೂಶಿರದ ಮೇಲೆಲ್ಲ !

ಸಂತಶ್ರೇಷ್ಠ, ಭಕ್ತಿನಿಧಿ "ಬಸವತತ್ತ್ವರತ್ನಾಕರ" ಕೃತಿಯನಿಂದು
ಸಂತಸಂದಿಂ "ಕನ್ನಡ ಕವಿ ಕಾಳಿದಾಸ" ಕರುಳಿನ ಕನ್ನಡ-
ನಾಡವರ್ಗಿತ್ತಪನಲ್ತೆ ಪೆರತುಂಟೆ ? ಹೇಳಾ !

ಶ್ರೀಶೈಲಮಲ್ಲಿಕಾರ್ಜುನ.

---

ವಿನಂತಿ :

ಮೇ ಮತ್ತು ಜೂನ್ ಸಂಚಿಕೆಗಳು ತಮ್ಮ ಕೈಗೆ ತಡವಾಗಿ ಸಂದಿವೆ. ಮುಂದಿನ ಸಂಚಿಕೆಗಳು ಕ್ರಮವಾಗಿ ಸಕಾಲಕ್ಕೆ ತಮಗ ತಲಪುವಂತೆ ವ್ಯವಸ್ಥೆ ಮಾಡಲಾಗಿದೆ. ಪತ್ರಿಕೆಯ ಅಭಿಮಾನಿ ವಾಚಕರು ಸಹಕರಿಸಬೇಕಾಗಿ ವಿನಂತಿಸುತ್ತೇನೆ.

ಸಂ.

---



# ಬಸವ ಪ್ರತಿಜ್ಞಾ

— ಟಿ. ಎನ್. ಮಹಾದೇವಯ್ಯ

"ಅರ್ಥ ಪ್ರಾಣ ಅಭಿಮಾನಕ್ಕೆ ಒಡೆಯರು ಸದ್ಭಕ್ತರಲ್ಲದೆ ಎನಗಾರು ಇಲ್ಲವಯ್ಯ. ಭೃತ್ಯಾಪರಾಧ ಸ್ವಾಮಿನೋದ್ದಂಡ ಕೂಡಲ ಸಂಗಮದೇವ ನೀವೇ ಪ್ರಮಾಣ"

ತನುವ ಬೇಡಿದೊಡೀವೆ, ಮನವ ಬೇಡಿದೊಡೀವೆ, ಧನವ ಬೇಡಿದೊಡೀವೆ, ಬೇಡು, ಬೇಡೆಲೆಹಂಸೇ! ಕಣ್ಣ ಬೇಡಿದೊಡೀವೆ, ತಲೆಯ ಬೇಡಿದೊಡೀವೆ, ಕೂಡಲ ಸಂಗಮ ದೇವಾ, ನಿಮಗಿತ್ತು ಶುದ್ಧನಾಗಿಪ್ಪೆ ನಮ್ಮ ಪುರಾತರ ಮನೆಯಲ್ಲಿ."

ಭವ್ಯವಾದ ಗುರಿಯ ಮಧುರ ಸಂಗೀತವು ಮನುಷ್ಯನಿಗೆ ಕೇಳಿಸಹತ್ತಿದಂತೆಲ್ಲಾ ಜಗತ್ತಿನ ಎಲ್ಲಾ ದನಿಗಳೂ ಕೆಳಗೆ ತುಳಿಯಲ್ಪಟ್ಟು ಆ ಸಮರಸದ ಗಾನವು ಸಾಮಗಾನದಂತೆ, ಹೃದಯ ಮಂದಿರದಲ್ಲಿ ಹಾಡುವುದು. ತ್ಯಾಗಮಂತ್ರದ ಘೋಷಣೆಯಾಗುವುದು. ಮನುಷ್ಯ ತನಗೆ ಸೇರಿರುವುದೆಲ್ಲವನ್ನೂ ಭಗವಾನನ ಚರಣಗಳ ಬಳಿ ಪರಹಿತಕ್ಕಾಗಿ ಅರ್ಪಿಸುವನು. ತನ್ನ ಎಲ್ಲ ಅಭಿಮಾನಗಳನ್ನೂ ಬಲಿಪೀಠದ ಮೇಲೆ ಕಳಚಿ ಮಡಗುವನು. ಇಡೀ ವಿಶ್ವದ ಐಶ್ವರ್ಯವೂ ಅವರಿಗೆ ಕಸ-ಕಡ್ಡಿಯಂತೆ ಭಾಸವಾಗುವುದು. ತನುವಿನ ಮೇಲಿನ ಮಮತೆಯು ತನುವಿನ ಮಾಂಸ–ರಕ್ತಗಳ ತುಚ್ಛ ಭಾವನೆಗೆ ಬರುವುದು.

ಧನದ ಮೇಲಿನ ಆಸೆಯಿಂದ ಮನುಷ್ಯನು ಪಂಚೇಂದ್ರಿಯಗಳ ದಾಸ್ಯತ್ವದ ಸೆರೆಗೆ ಸಿಕ್ಕಿಬೀಳುವನು. ಅತ್ಯಾಚಾರ ಅನಾಚಾರಗಳನ್ನು ಸ್ವೀಕರಿಸಿ ನರಕದ ಕೀಟಾಣುವಾಗುವನು. ಗುರಿಯ ಸುಂದರ ದೃಶ್ಯದ ಮೇಲೆ ಕಾರ್ಮೋಡದ ಕತ್ತಲು ಕವಿದು ಕಣ್ಣಿಗೆ ಅಂಧಕಾರದ ಮುಸುಗು ಮುಚ್ಚುವುದು. ಪರಮಾತ್ಮನ ದಿವ್ಯ ರೂಪಿಗೆ ಕಳಂಕ ಹತ್ತುವುದು. ಅದಕ್ಕಾಗಿಯೇ ಸ್ವಾಮಿ ವಿವೇಕಾನಂದರು – "Shiva ! Shiva! Has it ever come to pass that a great work has been grown by the rich? It is the brain and heart that creates and not the Purse" – ಎಂತಿರುವರು. ಮಹತ್ಕಾರ್ಯಗಳೊಳಕೆಯು ಸಿರಿವಂತರಿಂದ ಎಂದೂ ಬೆಳೆದಿಲ್ಲ. ಮನುಷ್ಯನ ಬುದ್ಧಿಶಕ್ತಿ, ಹೃದಯಗಳು ಕರ್ತವ್ಯ ಸೃಷ್ಟಿಮಾಡಿರುತ್ತವೆಯೇ ಹೊರತು ಹಣದ ಚೀಲವಲ್ಲ – ಎಂಬುದೇ ಅದರ ಭಾವ. ಮೇಲಾಗಿ ಹಣವು ಪರರದು. ಅದು ಪರಹಿತಕ್ಕಾಗಿ ಉಪಯೋಗಿಸಲ್ಪಡಬೇಕು. ಮನುಷ್ಯರಿಗೆ ಅದರಮೇಲೆ ಯಾವ ಅಧಿಕಾರವೂ ಇರುವುದಿಲ್ಲ.

ಅದಕ್ಕಾಗಿಯೇ ಅರವಿಂದ ಘೋಷರು ಇಂತೆಯೆ ನುಡಿದಿರುವರು. "All Wealth belongs to the Divine and those who hold it are trustees and not possessor, ಎಲ್ಲ ಐಶ್ವರ್ಯವು ದೇವನ ಸ್ವತ್ತು; ಅದನ್ನು ಹೊಂದಿರುವರು ಕಾವಲುಗಾರರೇ ಹೊರತು ಅದರ ಒಡೆಯರಲ್ಲ. ಕಾವಲುಗಾರನು ಅದನ್ನು ಸರಿಯಾಗಿ ಮುಟ್ಟಿಸಬೇಕು. ಪ್ರವೃತ್ತಿ ರೂಪದ ವಸ್ತುವು ಆ ಧನ ಮನುಷ್ಯನನ್ನು ಪಂಚ ಮಮಕಾರದಂತೆ ಸೆರೆಯಲ್ಲಿ ಕೆಡಹುವುದೀ ಧನವು, ಆ ಸೆರೆತನದ ಸರಪಳಿಯನ್ನು ಚೂರುಮಾಡಿ ಮುಂದುವರಿಯುವನೇ ಮಹಾತ್ಮ! ಮನುಷ್ಯನು ಅದರಿಂದ ನಿವೃತ್ತನಾದನೆಂದರೆ ನಿಜ ಸುಖವನ್ನು ಹೊಂದುವನು. ಅದಕ್ಕಾಗಿಯೇ ಸ್ವಾಮಿ ರಾಮತೀರ್ಥರು ನೀವು ನಿಷ್ಕಾಂಚನರಾಗಿರಿ ಅಂದರೆ ನೀವು ಸಾರ್ವಭೌಮ ರಾಜರೇ ಆಗುವಿರಿ ಅಂದಿರುವರು. ಈ ಅಶಾಶ್ವತ ಐಶ್ವರ್ಯದ ಮೇಲೆ ಕಣ್ಣಿಟ್ಟು ಮನುಷ್ಯನು ತನ್ನ ಜೀವನವನ್ನು ನಾಶ ಮಾಡಿಕೊಳ್ಳತಕ್ಕದ್ದಲ್ಲ. ಆತ್ಮ ಬಲದ ಐಶ್ವರ್ಯವನ್ನು ಅವನು ಕೂಡಿಡಲೇಬೇಕು. ಅದಕ್ಕಾಗಿಯೇ ಮಹಾಪುರುಷನಾದ ಯೇಸು ಕ್ರಿಸ್ತನು ನಿಮಗಾಗಿ ಐಶ್ವರ್ಯವನ್ನು ಭೂಮಿಯ ಮೇಲೆ ಕೂಡಿಡ ಬೇಡಿರಿ. ಆದರೆ ನಿಮಗಾಗಿ ಐಶ್ವರ್ಯವನ್ನು ಸ್ವರ್ಗದಲ್ಲಿಡಿರಿ ಅಂದಿರುವನು. ಧನದ ಮೇಲಿನ ಅಭಿಮಾನವು ಕರಗಿ ಜೀವನ ಸಂಗೀತವು ನಂದನ ವನದಲ್ಲಿ ತನ್ನ ತನಿರಸವನ್ನು ಸೂಸುತ್ತಿರಬೇಕು, ಜೀವದ ಸವಿಗಂಪು ದೇವನ ಬಳಿ ಹರಡಬೇಕು. ಅದಕ್ಕಾಗಿಯೇ ಭಗವಾನ್ ರಾಮಕೃಷ್ಣ ಪರಮಹಂಸರು "ಹೆಣ್ಣು ಹೊನ್ನಿನ ಗಾಳಿಗೆ ಸಿಲುಕಕೂಡದು; ಇದರ ಮೇಲೆ ಭಗವಂತನಲ್ಲಿ ಶ್ರದ್ಧೆ ಬೇಕು; ಆ ಶ್ರದ್ಧೆಯ ಬಲದಿಂದಲೇ ಸಾಧಕನು ಎಳ್ಳಷ್ಟು ಅನುಮಾನವಿಲ್ಲದೆ ಸಾಗರವನ್ನು ದಾಟಬಲ್ಲನು" ಅಂದಿರುವರು. ಆದುದರಿಂದ ಧನದ ಮೇಲಿನ ಅಭಿಮಾನವು ಪೂರ್ಣವಾಗಿ ಅಳಿದು, ಅದನ್ನು ಪರಹಿತಕ್ಕಾಗಿ ಜೀವನ ಚರಣಗಳ ಬಳಿ ಅರ್ಪಿಸುವನೇ ಮಹಾಪುರುಷ.

ಪ್ರಾಣದ ಮೇಲೂ ಮನುಷ್ಯನಿಗೆ ಅಭಿಮಾನ ಬಹಳವಿರುವುದು. ಅದನ್ನಾದರೂ ಅವನು ಧನದಂತೆಯೇ ಪೂಜಿಸುವುದರಲ್ಲಿ ಮಹತ್ವವಿರುವುದು. ಪ್ರಾಣದ ಅಭಿಮಾನವು ಪ್ರಚಂಡವಾದುದು. ಅದರ ತ್ಯಾಗವೆಂದರೆ ಮನುಷ್ಯ ಜೀವನದ ಸರ್ವಸ್ವದ ತ್ಯಾಗವೇ ಸರಿ. ಪ್ರಾಣದ ಅಭಿಮಾನದಿಂದ ತನುವಿನ ಮೇಲೂ, ತನುವಿನಿಂದ ಇಂದ್ರಿಯಗಳ ಮೇಲೂ, ಅಲ್ಲಿಂದ ವ್ಯವಹಾರದ ಮೇಲೂ ಆಸೆ ಹುಟ್ಟುವುದು. ಅಂದಮೇಲೆ ಮನುಷ್ಯನಿಗೆ ದೇವ ದೇವರ ಸಮರಸತೆಯು ಮಾತೂ ಕೂಡ ಬಹಳ ದೂರವೇ ಉಳಿಯಿತು. ಬಸವೇಶ್ವರನು ಈ ಪ್ರಾಣದ ಅಭಿಮಾನವನ್ನು ಪರಹಿತಕ್ಕಾಗಿ ದೇವಭಕ್ತರ ಹಿತಕ್ಕಾಗಿ ಪರಮಾತ್ಮನ ಪಾದಗಳ ಬಳಿ ಅರ್ಪಿಸಿಬಿಟ್ಟಿರುವನು. ಇದು ಬಹು ದೊಡ್ಡ ತ್ಯಾಗವೇ ಸರಿ.



ತನ್ನ ಧನಾಭಿಮಾನ ಪ್ರಾಣಾಭಿಮಾನಗಳೆರಡೂ ಪರರ ಸೇವೆಗೆಂದು ಅರ್ಪಿಸಿದ ಹೊರತು ಆತ್ಮಜ್ಞಾನವಾಗಲಾರದು. ಅದಕ್ಕಾಗಿಯೇ ಸ್ವಾಮಿ ರಾಮತೀರ್ಥರು ತ್ಯಾಗದ ಹೊರತಾಗಿ ಆತ್ಮಜ್ಞಾನವು ಬರಲಾರದು ಅಂದಿರುವರು. ಗುರಿ ಸೇರಲು ಇಚ್ಛಿಸುವರೆಲ್ಲರೂ ಈ ವಿಧವಾದಸರ್ವಸುಮರ್ಪಣ ಭಾವವನ್ನೂ ಮನಮುಟ್ಟಿ ಅರಿತು ನಡೆದು ತೋರಿಸಬೇಕು ಅದಕ್ಕಾಗಿಯೇ ಅರವಿಂದ ಘೋಷರು ಇಂತೆಂದಿರುವರು. "Let your sincerity and surrender be genuine and entire when you give yourself, give completely without demand, without condition, without reservation so that all in you shall belong to the Divine Matha and nothing be left to the ego or given to any other power". ನಿನ್ನ ಶ್ರದ್ಧೆ, ಶರಣತೆಗಳೂ ನಿಷ್ಠೆ ಪೂರ್ಣತೆಯುಳ್ಳವುಗಳಾಗಿರಲಿ. ನಿನ್ನ ಅರ್ಪಣವಾಗುವಾಗ, ಕೇಳದೆ, ನಿಯಮಗಳನ್ನೊಡ್ಡದೆ, ಏನನ್ನೂ ಕಾದಿಡದೆ, ಎಲ್ಲವೂ ದೇವಮಾತೆಗೆ ಸೇರಿದುದೆಂದು ಪೂರ್ಣವಾಗಿ ಅರ್ಪಿಸಿಬಿಡು. ಮಾಯೆಗಾಗಲೀ ಮತ್ತಾವ ಶಕ್ತಿಗಾಗಲಿ ಏನೂ ಉಳಿಯದಿರಲಿ. ಈ ಅರ್ಪಣವಾದರೂ ಇದೇ ಆಗಿದೆ. ಜಗತ್ತಿನ ಸೇವೆಗಾಗಿ ದೇಹಾಭಿಮಾನ, ಪ್ರಾಣಾಭಿಮಾನ, ಧನಾಭಿಮಾನ ಮೊದಲಾದ ಎಲ್ಲ ಅಭಿಮಾನಗಳನ್ನು ದೇವಭಕ್ತರ ಚರಣತಲದಲ್ಲಿ ಪರಮಾತ್ಮನನ್ನು ಪ್ರಮಾಣವಾಗಿಟ್ಟುಕೊಂಡು ಪ್ರತಿಜ್ಞಾ ರೂಪದಿಂದ ಬಸವೇಶ್ವರನು ತ್ಯಾಗ ಮಾಡಿರುವನು. ಭಕ್ತ ಯೋಗಿಗಳ ಈ ಸ್ಥಿತಿಯನ್ನು ಸ್ವಾಮಿ ವಿವೇಕಾನಂದರು ಈ ರೀತಿ ವರ್ಣಿಸಿರುವರು. "So this love of the pleasures of the senses and of the intellect is all made dim, and thrown aside and cast in to the shade by the love of God himself" ಸುಖಧಾಶೆ, ಇಂದ್ರಿಯ ಬುದ್ಧಿಗಳಾಸೆಗೆ ಮಂಕು ಕವಿದು ದೇವನ ಪ್ರೇಮದಿಂದ ಎಲ್ಲವೂ ದೂರಕ್ಕೆ ಎಸೆಯಲ್ಪಡುವುವು; ನೆರಳಿನಲ್ಲಡಗಲ್ಪಡುವುವು". ಬಸವೇಶ್ವರನ ತ್ಯಾಗಸಿದ್ಧತೆಯು ಹಿರಿದಾದ ಭಕ್ತಿಯಲ್ಲಿ ಉಂಟಾದ ಫಲರೂಪದ ಅವಸ್ಥೆಯನ್ನು ಈ ವಚನದಲ್ಲಿ ವಿವರಿಸಿರುತ್ತಾನೆ. ನನ್ನ ಧನದಭಿಮಾನ ಪ್ರಾಣದ ಅಭಿಮಾನಗಳಿಗೆ ಒಡೆಯರು ಜಗತ್ತಿನ ಎಲ್ಲ ದೇವಭಕ್ತರು. ಯಾವ ಸಿರಿಯೂ ನನಗೆ ಸೇರಿರುವುದಿಲ್ಲ. ಜಗತ್ತಿನ ಭಕ್ತಕೋಟಿಯ ಕಲ್ಯಾಣಕ್ಕಾಗಿ ಅರ್ಪಿತವಾದ ಪ್ರಾಣವೂ ನನಗೆ ಸೇರಿರುವುದಿಲ್ಲ. ತಪ್ಪು ಮಾಡಿದವರು ನಿನಗೆ ಶರಣು ಹೋಗಲು ಮನ್ನಿಸುವ ಪರಮಾತ್ಮನೇ ಇದರ ಸತ್ಯಾಸತ್ಯತೆಗೆ ನೀನೇ ಪ್ರಮಾಣನಾಗಿರು."

# ಭುವಿಗಿಳಿದ ಶಿವತಾನು ಇವರಿಗೊಲಿದು

**ರುದ್ರಪಶಪತಿ–2**

ಚೋಳ ದೇಶದ ಶಿವಪುರದಲ್ಲಿ ರುದ್ರಪ್ರಭುದೇವಾ ಎಂಬ ಒಬ್ಬ ಭಕ್ತ ಇದ್ದ, ಆತನ ಹೆಂಡತಿ ಹೆಸರು ಶುಚಿದೇವಿ, ಪರಮ ಪತಿವ್ರತೆಯಾಗಿ ಪತಿಗೆ ಅನುಕೂಲೆಯಾಗಿ ಇದ್ದಳು.

ಶಿವನ ಭಕ್ತಿರಸವೆ ಭೂಮಿಗೆ ಹರಿದು ಬಂದಂತೆ ಇವರ ಬಸುರಿಂದ ಒಂದು ಮಗು ಜನಿಸಿತ್ತು, ಅವನಿಗೆ ರುದ್ರಪಶುಪತಿ ಎಂದು ಹೆಸರಿಟ್ಟರು, ಜೋಗುಳ ಹಾಡುವಾಗ ಶಿವನಾಮ ಹಾಡಿ ತೂಗಿ ಮಲಗಿಸಿದರೆ ನಿದ್ರಿಸುತ್ತಾನೆ, ಶಿವನಿಗೆ ಅಭಿಷೇಕ ಮಾಡಿದ ಹಾಲು ಕುಡಿಸಿದರೆ ಮಾತ್ರ ಕುಡಿಯುತ್ತಾನೆ.

" ಪ್ರಪಂಚಕ್ಕೆ ಶಿವಭಕ್ತಿಯನ್ನು ಕಲಿಸುತ್ತಾನೆ. ತನ್ನ ಭಕ್ತಿ ವೈಶಿಷ್ಟ್ಯದಿಂದ ಶಿವನನ್ನು ಭೂಮಿಗೆ ಕರೆಸುತ್ತಾನೆ. " ಎಂದು ಜೋಯಿಸರು ಆ ಮಗುವಿನ ಬಗ್ಗೆ ಭವಿಷ್ಯ ಹೇಳಿದರು.

ತಂದೆ ಮಾಡುವ ಶಿವಾರ್ಚನೆ ನೋಡುತ್ತಾ.... ತಾಯಿ ಹಾಡುವ ಶಿವಕೀರ್ತನೆ ಕೇಳುತ್ತಾ ಬಾಲಕ, ಬೆಳೆದ ತನ್ನ ಪುಟ್ಟಪುಟ್ಟ ಕೈಗಳಿಂದ ಬಿಲ್ವದಳಗಳನ್ನು ಕಿತುಕಿತ್ತು ಶಿವಲಿಂಗಕ್ಕೆ ಅರ್ಚನೆ ಮಾಡುವ, ಮುದ್ದಾದತೊದಲ್ನುಡಿಯಿಂದ " ನಮಃ ಶಿವಾಯ ನಮಃ ಶಿವಾಯ " ಎನ್ನುತ್ತಾ ಕಣ್ಣು ಮುಚ್ಚುವ, ಭಕ್ತಿಯಿಂದ ಶಿವನ ನಾಮಗಳನ್ನು ಹೇಳುತ್ತಾ ಅರ್ಚನೆ, ಶಿವನಿಗೆ ಕ್ಷೀರಾಭಿಷೇಕಾ .... ಹೀಗೆ ಬೆಳೆದು ಹದಿನಾರು ವರ್ಷದ ತರುಣನಾದ.

ಶಿವನ ಬಗ್ಗೆ ಅವನಿಗೆ ಮಧುರ ಕಲ್ಪನೆ ಇದೆ. ಶಿವನ ಹಣೆಗಣ್ಣಲ್ಲಿ ಅಗ್ನಿ ಇರುವುದಾಗಲಿ.... ಶಿವನು ಹಲಾಹಲನುಂಗಿದ್ದಾಗಲಿ.... ಶಿವನು ಉರುಗ ಭೂಷಣನೆಂದಾಗಲಿ ಶಿವನು ಶ್ಮಶಾನವಾಸಿ ಎಂದಾಗಲಿ ಅವನಿಗೆ ಗೊತ್ತಿಲ್ಲ.

ಒಂದು ದಿನ ಶಿವನಿಗೆ ಅಭಿಷೇಕ ಮಾಡುತ್ತಿರುವಾಗ ಶಿವಲಿಂಗದ ಮೇಲೆ ಒಂದು ಇರುವೆ ಹರಿಯುತ್ತಾ ಇರುವುದ ಕಂಡು " ಹಾ....ಹಾ....ಎನ್ನ ತಂದೆ.... ಇರುವೆ ನಿನ್ನ ಕಚ್ಚಿದರೆ ನಿನ್ನ ಕೋಮಲ ತನುವಿನಗತಿ ಏನಾಗುತ್ತಿತ್ತು ? ಆಹಾ ! ತಾಯಿ ಪಾರ್ವತಿ ನಿನ್ನಪತಿಯ ಮೇಲೆ ಇರುವೆ ಹರಿಯುತ್ತಿದ್ದರು ಸುಮ್ಮನಿರುವೆಯಾ ? ನಿನ್ನ ಪತಿಭಕ್ತಿ ಏಕಿಂತಾಯ್ತು ತಾಯಿಾ.... " ಎನ್ನುತ್ತಾ ಆ ಇರುವೆ ತೆಗೆದು ಬಿಸಟು ಆ ಜಾಗಕ್ಕೆ ತುಪ್ಪಸವರಿ ಹಾಲು ಅಭಿಷೇಕ ಮತ್ತೇ ಮತ್ತೇ ಮಾಡಿದ.

ಒಂದು ದಿನ ರುದ್ರಪಶುಪತಿ ಪೂಜೆಗೆ ಬಂದಾಗ ಅಲ್ಲಿ ಒಬ್ಬ ಸಾಧು ಕುಳಿತು ಶಿವಪುರಾಣ ಹೇಳುತ್ತಿದ್ದ, ಶಿವಾನ ಮಹಾತ್ಮೆ ಎಂದು ತಿಳಿದೊಡನೆ ರುದ್ರಪಶುಪತಿ ತಾನು ಸಂಭ್ರಮದಿಂದ ಕುಳಿತು ಕೇಳತೊಡಗಿದ.

ಕಥೆ ಅಮೃತ ಮಂಥನದ ವಿಷಯದತ್ತ ಬಂದಿತ್ತು ಕ್ಷೀರ ಸಾಗರ ಕಡೆಯುವಾಗ ಮೊದಲು ಹುಟ್ಟಿದ ಹಾಲಹಲವೆಂಬ ಭಯಂಕರ ವಿಷವನ್ನು ಶಿವಪಾನಮಾಡಿದ್ದನ್ನು ಸಾಧುಗಳು ವಿವರಿಸುತ್ತಿದ್ದರು.

ರುದ್ರಪಶುಪತಿ ಉಸಿರು ಬಿಗಿಹಿಡಿದು ವಿಷಯ ಕೇಳುತ್ತಿದ್ದವನು.... "ಮೂಲೋಕವನ್ನೇ ಸುಡುವ ಆ ವಿಷಯವನ್ನು ಶಿವ ಬೊಗಸೆಯಲ್ಲಿ ಹಿಡಿದು ಕುಡಿದ...." ಎಂಬುದ ಕೇಳುತ್ತಿದ್ದಂತೆ " ಏನಪ್ಪ ಶಿವಾ... ಏನುಮಾಡಿದೆ ತಂದೆ.... ಎನೊಡಯ ಶಿವಾ ದುರುಳರಾದು ನಿನಗೆ ಮೋಸಮಾಡಿ ಇಂಥಾ ಕೆಲಸಕ್ಕೆ ಮನ ಮಾಡಿಸಿದರು, ದೇವತೆಗಳು ಹೇಗೆ ಸುಮ್ಮನಿದ್ದರು? ಆ ನರರಿಗಿಂತ ಅವರು ಸ್ವಾರ್ಥಿಗಳಾದರೆ ? ನನ್ನ ಪ್ರಭುವಿಗೆ ವಿಷ ಕೊಡಿಸಿದರೆ ? ಅಕಟಕಟಾ ತಾಯಿ.... ಪಾರ್ವತಿದೇವಿ ನೀನಾದರು ಈ ಭಯಂಕರ ಕೃತ್ಯಕ್ಕೆ ಎಂತು ಸಮ್ಮತಿಸಿದೆಯವ್ವಾ ಶಿವನ ಹಸ್ತ ಹಿಡಿದು ತಡೆಯಬಾರದಿತ್ತೆ....?

ಎಂದು ಹಲುಬುತ್ತಾ ದುಃಖದಿಂದ ಓಡಿ ಹೋದ, ಶಿವಾ....ಶಂಕಾರ.... ರುದ್ರಾ ಗಂಗಾಧರಾ....ಎಲ್ಲಿರುವೆ ತಂದೆ... ನಿನ್ನಬಾಯಲ್ಲಿರುವ ವಿಷ ಉಗುಳು ಸ್ವಾಮಿ ಮನೋಹರವಾದ ಚಂದ್ರ ನಿನ್ನಶಿರದಲ್ಲಿ ಇರುವನೆಂದು ನಂಬಿದ್ದೆ, ತಂಪಾದ ಗಂಗೆ ನಿನ್ನ ತಲೆಯಲ್ಲಿ ಇಹಳೆಂದು ತಾಯಿ ಹೇಳಿದ್ದು ನಂಬಿದ್ದೆ, ಶೀತಲವಾದ ಹಿಮಾಲಯದ ತಪ್ಪಲಿನಲ್ಲಿ ಚೆಲುವೆಯಾದ ಉಮೆಯೊಡನೆ ಸುಖಾನಂದದಿಂದ ವಿಹರಿಪೆನೆಂದು ನಂಬಿದ್ದೆ, ಆದರೆ ನಿನ್ನ ಕೊರಳಿನಲ್ಲಿ ತ್ರಿಲೋಕ ಸುಡುವ ವಿಷವಿದೆಯೆಂದು ತಿಳಿದ ಮೇಲೆ ನಾನು ಹೇಗೆ ಬದುಕಲಿ ತಂದೆ .... ಎನ್ನುತ್ತಾ ಅಲ್ಲೆ ಇದ್ದ ಹಾಳುಬಾವಿಯಲ್ಲಿ ಹಾರಿಬಿಟ್ಟ. ಆದರೆ ಅವನ ಪ್ರಾಣ ಹೋಗಲಿಲ್ಲ, ಒಡನೆಯೇ ಪಾರ್ವತಿ ಸಮೇತ ಶಿವಾ ಪ್ರತ್ಯೆಕ್ಷನಾದ. " ಎಲೆ ಮಗುವೆ ಬೆದರದಿರು ನಾನು ಸುಖದಿಂದರ್ಪೆ, ಎಂದು ಸಂತೈಸಿದ, " ತ್ರಿಲೋಕ ಸುಡುವ ವಿಷ ನನ್ನ ಕೊರಳಲ್ಲಿ ತಂಪಾಗಿದೆ, ಅದರಿಂದ ನನಗೇನಾಗದು ಎಂದು ಒತ್ತಿಹೇಳಿದ, ಆದರೆ ರುದ್ರಪಶುಪತಿ ಕೇಳುವನೇ ?

" ಊ ಹೂಂ .... ನಿನ್ನಕೊರಳಲ್ಲಿ ವಿಷವಿದ್ದರೆ ನಾನು ಬದುಕಿರಲಾರೆ ಉಗುಳಿಬಿಡು ತಂದೆ.... ಉಗುಳುಗುಳು.... ಆಕಸ್ಮಿಕವಾಗಿ ಗಂಟಲಿಂದ ಒಂದು ಹನಿ ಒಡಲಿಗಿಳಿದರೆ ನಿನ್ನ ಗತಿ ಏನುತಾಯಿ.... ನೀನು ಏಕೆ ಸುಮ್ಮನಿದ್ದೆ ? ಕುಡಿದಾಗಲೆ ಉಗಳಿಸಬೇಕಿತ್ತು " ಎಂದು ಉಮೆಯ ಮೇಲು ಜೋರು ಮಾಡಿದ ಶಿವನೆದುರು ಅತ್ತ, ಹೊರಳಾಡಿದ ಮತ್ತೆ ಮತ್ತೆ ಗೋಗರೆದ.



ಶಿವ ತನ್ನ ಭಕ್ತತನಿಗೆ ಬಗೆಬಗೆಯೂಗಿ ಸಮಾಧಾನ ಹೇಳಿದ ಆದರು ರುದ್ರ ಪಶುಪತಿ ಮಾತ್ರ ಕೇಳಲಿಲ್ಲ ಉಗುಳಲೆ ಬೇಕೆಂದು ಹಠಹಿಡಿದು.

ಶಿವನಿಗೆ ಪೇಚಾಟಕ್ಕಿಟ್ಟು ಕೊಂಡಿತ್ತು, ತನ್ನ ಗಂಟಲಲ್ಲಿ ತಂಪಾಗಿ....ಒಂದು ಉಂಡೆಯ ಪ್ರಮಾಣದಲ್ಲಿರುವ ಈ ಹಲಾಹಲವನ್ನು ಅಲ್ಲಿಂದ ಉಗುಳಿದರೆ.... ಅದು ನಿವಿಷ ನಿಮಿಷಕ್ಕೆ ಪರ್ವತದೆತ್ತರದ ಜ್ವಾಲೆ ವಿಸ್ತರಿಸುತ್ತಾ ಬೆಳೆದು ಇಡಿ ಭೂಮಿ ಸ್ವರ್ಗ ಪಾತಾಳಗಳನ್ನು ಸುಟ್ಟು ಭಸ್ಮ ಮಾಡುತ್ತದೆ, ಲೋಕಹಿತಕ್ಕಾಗಿ ತಾನು ಧರಿಸಿರುವುದೆಂದು ಭಕ್ತನಿಗೆ ಎಷ್ಟು ಹೇಳಿದರು ಕೇಳುವುದಿಲ್ಲ ಎಂದು ಶಿವಾ ಆಲೋಚನೆಗೊಳಗಾಗುತ್ತಾನೆ, ತನ್ನ ಮಾತು ದೇವ ಪಾಲಿಸಲಿಲ್ಲವೆಂದು ರುದ್ರಪಶುಪತಿ ....ಕತ್ತಿಯನ್ನೆತಿ ತನ್ನ ಶಿರಕ್ಕೆಹಾಕಿ ಕೊಳ್ಳುತ್ತ... ನಿನ್ನ ಗಂಟಲಿಂದ ವಿಷಹನಿದು ಒಡಲಿಗೆ ಸೇರ್ಪುದೇನೊ.... ಎಂದು ಭಯದಿಂದ ನಾನು ಭ್ರಾಂತ್ರನಾಗಿ ತೊಳಲ್ಪುದ ಕಿಂತ ಪ್ರಾಣತ್ಯಾಗವೇ ಎನಗೆ ಹಿತಕರಂ " ಎಂದು ಹೇಳುತ್ತಾನೆ.

"ಆಗ ಶಿವ ಅವನ ಹಸ್ತ ಹಿಡಿದು" ಹೀಗೆ ನೀನು ಎತ್ತಿ ಹಿಡಿದ ಕತ್ತಿಯೊಂದಿಗೆ ನನಗೆ ಅಂಗರಕ್ಷಕನಾಗಿ ಇರು, ನನ್ನೊಂದಿಗೆ ಕೈಲಾಸಕ್ಕೆ ಬಾ ಪಾರ್ವತಿಯೊಡನೆ ಏಕಾಂತದಲ್ಲಿದ್ದಾಗಲೂ ನೀನು ನನ್ನ ಮೇಲೆ ಕಣ್ಣಿಟ್ಟಿರು, ಗಂಟಲರಸ ಒಡಲಿಗೆ ಇಳಿಯುವವರಿಗೆ ಶಾಂತನಾಗಿರು ಎಂದು ತನ್ನ ಕೈಲಾಸಕ್ಕೆ ಕರೆದೊಯುತ್ತಾನೆ. ಅಲ್ಲಿಹೋದ ಮೇಲೆ ಅವನಿಗೆ ಚಿರಂಜೀವತ್ವ ಹಾಗೂ ದ್ವಿವ್ಯಜ್ಞಾನ ಲಭಿಸುತ್ತದೆ,ವಿಷ ಶಿವನಿಗೇನು ಮಾಡುವುದಿಲ್ಲ ಎಂಬ ಅರಿವುಂಟಾಗುತ್ತದೆ.

ಆದರು ಉತ್ಕಟ ಭಕ್ತಿ ಇಂದ ಎತ್ತಿ ಹಿಡಿದ ಖಡ್ಗದೊಡನೆ ಶಿವನ ಅಂಗರಕ್ಷನಾಗಿ ಶಿವನನ್ನು ಕಣ್ಣಿಲ್ಲಿಟ್ಟು ರಕ್ಷಿಸುತ್ತಿರುವನು.

# ಶಿವಶರಣೆ ನೀಲಾಂಬಿಕೆ

— ಪ್ರೊ॥ ಎಸ್. ಎಸ್. ಭೂಸರೆಡ್ಡಿ M. A. B.Ed.
ಅಧ್ಯಾಪಕರು, ಕನ್ನಡ ಅಧ್ಯಯನ ಪೀಠ ಕ.ವಿ.ವಿ. ಧಾರವಾಡ-3

ನೀಲಾ, ನೀಲಾಂಬೆ, ನೀಲಾಂಬಿಕೆ, ನೀಲಲೋಚನೆಯಮ್ಮ, ನೀಲಮ್ಮ ನೀಲಮ್ಮತಾಯಿ—ಹೀಗೆ ಪರ್ಯಾಯ ಹೆಸರಿನಿಂದ ಆತ್ಮೀಯವಾಗಿ ಕರೆಯಲ್ಪಡುತ್ತಿರುವ ನೀಲಾಂಬಿಕೆ ಐತಿಹಾಸಿಕ ಚಾರಿತ್ರಿಕ ಪ್ರಸಿದ್ಧ ಶಿವಶರಣೆ; ಮಹಾಪತಿವ್ರತಾ ಶಿರೋಮಣಿ; ಜ್ಞಾನದ ಖಣಿ, ಮುಕ್ತಿಯ ಮಣಿ, ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಭಾರತೀಯ ಆಧ್ಯಾತ್ಮಿಕ ಲೋಕದಲ್ಲಿ ವಿನೂತನ ಸುವರ್ಣಮಯ ಅಧ್ಯಾಯ ನಿರ್ಮಿಸಿದ ಭಾರತದ ಪ್ರಪ್ರಥಮ ಸ್ವತಂತ್ರ, ವಿಚಾರವಾದಿ, ವಿಶಿಯಾದ ಮಹಾಬೆಳಕು, ಮಹಾಮಾನವತಾವಾದಿಯಾದ ಜಗಜ್ಯೋತಿ ಅಣ್ಣ ಬಸವಣ್ಣನವರ ಧರ್ಮಪತ್ನಿ ಪುಣ್ಯಾಂಗಣೆ. ಅಪ್ರತಿಮ ವಚನಕಾರ್ತಿ ಅಸಾಧಾರಣ ಶಿವಾನುಭವಿ.

ಬಹುಶಃ ವೀರವಿರಾಗಿಣಿ ಅಕ್ಕಮಹಾದೇವಿಯನ್ನು ಬಿಟ್ಟರೆ ನೀಲಾಂಬಿಕೆಯನ್ನು ಸ್ತೋತ್ರ ಮಾಡಿದಷ್ಟು ಇನ್ನಾರನ್ನೂ ಮಾಡಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಮಹಾಜ್ಞಾನಿ ಅಕ್ಕಮಹಾದೇವಿ ಕನ್ನಡ ಸಾಹಿತ್ಯ ಪ್ರಪಂಚದ ಪ್ರಪ್ರಥಮ ಕವಯಿತ್ರಿಯಾದರೆ, ಲಿಂಗಪ್ರಾಣಿ ನೀಲಾಂಬಿಕೆ ಕನ್ನಡ ಸಾಹಿತ್ಯ ಪ್ರಪ್ರಥಮ ಶೋಕಸಾಹಿತ್ಯದ ಹರಿಕಾರರಾಗಿ ಬೆಳಗಿದ್ದಾಳೆ. ಭಾರತೀಯ ಸಂಸ್ಕೃತಿಯ ಪ್ರತಿನಿಧಿ ಪರಮ ಪತಿಯಾದ ನೀಲಾಂಬಿಕೆ ಪತಿಯ ನೆರಳಿನಂತೆ ನಡೆದು ಅಣ್ಣನವರು ಹಮ್ಮಿಕೊಂಡ ಮಹಾಕಾರ್ಯದಲ್ಲಿ ಅಪ್ರತಿಮ ಸೇವೆ ಸಲ್ಲಿಸಿದ ಮಹಾನುಭಾವೆ. 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂಬ ಮಾತಿಗೆ ಶ್ರೇಷ್ಠ ನಿದರ್ಶನ; ಉತ್ತಮ ಉದಾಹರಣೆ ನೀಲಮ್ಮನೆಂದು ಕೈಯೆತ್ತಿ ಹೇಳಬಹುದು. ಇದೊಂದು ಅಪರೂಪದ ಅನುರೂಪದ ಅನನ್ಯ ಸದೃಶ ಅಪೂರ್ವ ವಿರಳ ದಾಂಪತ್ಯ ಜೋಡಿ. ಗಂಡ ಹೆಂಡಿರಮನ ಒಂದಾಂದರೆ ದೇವರ ಮುಂದೆ ನಂದಾದೀಪ ಹಚ್ಚಿದಂತೆ ಎಂದು ಅಂಬಿಗರ ಚೌಡಯ್ಯನ ವಾಣಿ ಇವರನ್ನು ಕಂಡೇ ಹೊರಬಂದಿರ ಬಹುದು.

“ ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ
ಲಿಂಗದ ಮೇಲ ನಿಷ್ಠೆಯಿಲ್ಲದ ಭಕ್ತ
ಇದ್ದರೇನೂ ಶಿವಶಿವಾ ಹೋದರೇನೋ ?
ಕೂಡಲ ಸಂಗಮದೇವಯ್ಯಾ
ಉಡದ ಆವಿಂಗೆ ಉಣ್ಣದ ಕರುವಬಿಟ್ಟಂತೆ ”

" ಗಂಡ ಶಿವಲಿಂಗದೇವರ ಭಕ್ತ
ಹೆಂಡತಿ ಮೂರಿಮುಸಣಿಯ ಭಕ್ತಳಾದರೆ " —

ಈ ಬಗೆಯಿಂದ ಎತ್ತು ಏರಿಗೆ ಎಳೆದರೆ ಕೋಣ ಕೆರೆಗೆ ಎಳದಂತಾದರೆ ಇಬ್ಬದಿಯ ಸಂಸಾರ ವಾಗುತ್ತದೆ. ಸರಸ ಸುಂದರ ಸಂಸಾರ ರಥ ಸುಗಮವಾಗಿ ಸಾಗಬೇಕಾದರೆ ರಥದ ಎರಡು ಗಾಲಿಗಳು ಸಮನಾಗಿಯೇ ಸಾಗಬೇಕಾಗುತ್ತದೆ. ಇಲ್ಲವಾದಲ್ಲಿ ವಿಷಮ ದಾಂಪತ್ಯದ ದುರಂತದಲ್ಲಿ ಬೆಂದು ಬೆಂಡಾಗಬೇಕಾಗುತ್ತದೆ. ಅದು ಹಾಲಾಹಲವೇ ಸರಿ. ಬಸವಣ್ಣ–ನೀಲಾಂಬಿಕೆಯರ ದಾಂಪತ್ಯ ಲೋಕಕ್ಕೆ ಮಾದರಿಯಾಗಿದೆ ಅಮೃತ ಫಲ ನೀಡಿದೆ. ನೇರಾ ಚಿರಂತನ ಮಾನವೀಯ ಮೌಲ್ಯಗಳನ್ನು ನೀಡಿದೆ. ನೀಲಾಂಬೆ ಭಕ್ತಿ ಭಂಡಾರಿಯ ಕೈ ಹಿಡಿದು ಜ್ಞಾನ ಭಾಂಡಾರಿಯಾದಳು. ಬಸವಾ ಎನ್ನುವ ಮೂರಕ್ಷರ ಅವಳಿಗೆ ಪರಮನ ಹಂಗನ್ನೂ ಪ್ರಾಣದ ಸಂಗವನ್ನೂ ಹರಿಯಲು ಸಮರ್ಥಳಾದಳು. ' ಬಸವನ ಅನುಭವದಿಂದ ವಿವರವ ಕಂಡು ವಿಚಾರ ವತ್ನಿಯಾದೆನಯ್ಯಾ " ಎಂದಿರುವ ಅವಳ ವಚನಗಳನ್ನೂ ಅಭ್ಯಾಸ ಮಾಡಿದರೆ ಅವಳ ಬಹು ವ್ಯಕ್ತಿತ್ವದ ಸ್ಪಷ್ಟ ಚಿತ್ರ ಗೋಚರಿಸುತ್ತದೆ. ಅವರ ದಾಂಪತ್ಯ ಜೀವನವೇ ಅಧ್ಯಾತ್ಮ ಜೀವನವಾಗಿತ್ತು. ಅಧ್ಯಾತ್ಮ ಜೀವನವೇ ದಾಂಪತ್ಯ ಜೀವನವಾಗಿತ್ತು. ಪ್ರಣವದ ಬೀಜವ ಬಿತ್ತಿ ಪಂಚಾಕ್ಷರಿಯ ಬೆಳೆ ಬೆಳೆದು ಪರಮ ಪ್ರಸಾದವನೊಂದು ರೂಪವಮಾಡಿ ಮೆರೆದು ಭಕ್ತಿ ಫಲವನುಂಡ ವೀರಶೈವ ನಿರ್ಣಯ ಪರಮಾವತಾರಿ ಅನುಭವ ಮಂಟಪದ ಸ್ಥಾಪನಾಚಾರ್ಯ ಬಸವಣ್ಣನ ಜೀವನ ಕೃಷಿಯಲ್ಲಿ ಹಿಂಬಲ-ಬೆಂಬಲ ನೀಡಿದ ಪರಮ ಸಾಧ್ವಿ ಯಾಕೆ. ಆದರ್ಶ ಸಂಸಾರಕ್ಕೆ ಇನ್ನೊಂದು ಹೆಸರು. ವೀರಶೈವ ಧರ್ಮಸಿದ್ಧಾಂತ ಸಂಸಾರದಿಂದ ಒಡಿ ಹೋಗುವ ಪಲಾಯನ ವಾದವನ್ನು ಎಂದಿಗೂ ಹೇಳಿಲ್ಲ. ಗಡ್ಡಬಿಟ್ಟು ಅರಣ್ಯದಲ್ಲಿ ಏಕಾಂಗಿಯಾಗಿ ಕುಳಿತು ಜಪತಪಗಳನ್ನು ಬೋಧಿಸುವುದಿಲ್ಲ. ನಿರಂತರ ಸತ್ಯ ಶುದ್ಧ ಕಾಯಕ ನಿರತನಾಗಿ ಪ್ರಸಾದ ಕಾಯುವನ್ನಾಗಿ ಮಾರ್ಪಡಿಸುವ ಸಹಜ ಕ್ರಿಯೆಯನ್ನು ಬೋಧಿಸಿದೆ. ಬುದ್ಧದೇವ ನತಂಪನೂ ಸಹ ಮಲಗಿದ ಮಡದಿಯನ್ನು ಮಮತೆಯ ಮಗುವನ್ನು ತೊರೆದು ಹೋದ. ಬಸವಣ್ಣ ಒಬ್ಬರನ್ನಲ್ಲ ಇಬ್ಬರು ಪತ್ನಿಯರೊಂದಿಗೆ ತಾತ್ವಿಕ ಬದುಕಿ ಬಾಳಿನ ಬೆಲೆಯನ್ನು ಹೆಚ್ಚಿಸಿದ್ದಾನೆ. ಸೊಗಸಾದ ದಾಂಪತ್ಯ ಜೀವನದ ಆದರ್ಶವನ್ನು ಜಗತ್ತಿಗೆ ತೋರಿಸಿದ್ದಾನೆ. ಸಂಸಾರ, ಹೇಯ ಸ್ವಾಶಿಕ್ತಾ ನಶ್ವರ ಮುಂತಾದ ಮಾತುಗಳಿಗೆ ಮಹತ್ವ ಕೊಡಲಿಲ್ಲ. ಜಗತ್ತು ಸತ್ಯವೆಂದೂ ಇರಬೇಕು, ಇದ್ದು ಜಯಿಸಬೇಕೆಂದು ತಿಳಿಯಪಡಿಸಿದ್ದಾನೆ. ಉರಿಬರಲಿ, ಸಿರಿಬರಲಿ, ಏನೂ ಬಂದರೂ ಕೊಲುವೆನೆಂಬುದು ದೇವನ ಭಾಷೆಯಾದರೆ ಗೆಲುವೆನೆಂಬುದು ಭಕ್ತಿ ಭಾಷೆಯಾಗಬೇಕೆಂಬ ಉದಾತ್ತ ಉದ್ದೇಶವನ್ನು ಜನಮನದಲ್ಲಿ ಅಚ್ಚೊತ್ತಿ ಮೂಡುವಂತೆ ಅರ್ಥಪೂರ್ಣ ಬದುಕು ಅವರದು.

ಸಿದ್ಧಗಂಗಾ



ಜನಪದ ಸಾಹಿತ್ಯದಲ್ಲಿಯಂತೂ ನೀಲಮ್ಮನ ಹೆಸರು ಜನಿಜನಿತವಾಗಿದೆ. ನೀಲಮ್ಮ ನಿನ್ನ ಹೆಸರ ಹೇಳಿ ಕೊನೆಮುಕ್ಕ ನಿಲಿಸೇನೆ ಎಂದು ಹಾಡಿಕೊಂಡಿರುವುದೇ ಸಾಕ್ಷಿ. ಲಿಂಗ ಪೂಜೆಯ ಮಾಡುತ್ತಿದ್ದಳು, ನಿಜಭಕ್ತೆ ನೀಲಾಂಬಿಕೆ " ಎನ್ನುವ ಮಾತು ಗಾದೆಯ ಮಾತಾಗಿ ಮಾರ್ಪಟ್ಟಿದೆ. ಇನ್ನೊಂದು ಲೋಕೋಕ್ತಿಯನ್ನು ಇಲ್ಲಿ ಜೋಡಿಸಬಹುದು. " ಬಸವಣ್ಣ ನಂಥ ಭಕ್ತಿವಂತರಿಲ್ಲ, ನೀಲಮ್ಮನಂಥ ಶರಣೆಯರಿಲ್ಲ, ಹೇಮರಡ್ಡಿ ಮಲ್ಲಮ್ಮನಂಥ ಸೊಸೆಯರಿಲ್ಲ."

ತ್ರಿವಿಧಿಗಳಲ್ಲಿ ನೀಲಮ್ಮ

" ಲಿಂಗಯ್ಯ ಲಿಂಗಾವೆ ಕಂಗಳಾ ಪುಣ್ಯವೆ
ಸಂಗನಬಸವನರ್ಧಾಂಗಿ ನೀಲಮ್ಮ
ಹಿಗದಲೆ ಎನಗೆ ಕೃಪೆಯಾಗು "

" ಅಪ್ರಮತಿ ಲಿಂಗದೊಳು ಸೊಪ್ಪಡಗಿನಿಂದ
ಎನ್ನಪ್ಪ ಬಸವೇಶನರ್ಧಾಂಗಿ ನೀಲಮ್ಮ
ತಪ್ಪದಲೆ ಎನಗೆ ಕೃಪೆಯಾಗು"

"ಕಡಲೇ ಕಾರುಣ್ಯದ ಒಡಲೇ ಪರಬ್ರಹ್ಮದ
ಕಡವರವೆ ಶರಣ ಸಂತತಿಗೆ ನೀಲಮ್ಮ
ಷಡುಸ್ಥಲದ ರೂಪೆ ಕೃಪೆಯಾಗು"

–ಹೀಗೆ ಸುಮಾರು 46 ತ್ರಿಪದಿಗಳಿವೆ. ಇವುಗಳಲ್ಲಿ ನೀಲಮ್ಮನ ಸೊಗಸಾದ ಧ್ವನಿಪೂರ್ಣವ್ಯಕ್ತಿತ್ವ ಅರಳಿ ನಿಂತಿದೆ. ನೀಲಮ್ಮನ ಉರುಟಣೆಯ ಹಾಡುಗಳಲ್ಲಿ ಆಕೆಯ ತಾತ್ವಿಕ ಜೀವನದ ಪದರುಗಳನ್ನು ನಮ್ಮ ಜನಪದರು ಬಹು ಜಾಣ್ಮೆಯಿಂದ ಹೆಣೆದಿದ್ದಾರೆ. ಉದಾಹರಣೆಗಾಗಿ ಈ ನಾಲ್ಕು ಸಾಲುಗಳನ್ನು ಇಲ್ಲಿ ಎತ್ತಿ ಕೊಂಡಿದೆ.

" ಅಂಗಭೋಗವನೆಲ್ಲ ಲಿಂಗಕ್ಕೆ ಅರ್ಪಿಸಿದಂತಾ
ಸಂಗನಬಸವ ನೀಲಮ್ಮನುತ್ಸಾಹ
ತನ್ನ ತಾನೇ ತಿಳಿದು ತನ್ನ ತಾನೆ ಮರೆದು
ತನ್ನ ಲಿಂಗದೊಳ್ ಬೆರೆದರು ಸಂಪನ್ನೆಯರೆಲ್ಲ "

ಸಮಕಾಲೀನ ಶರಣರ ದೃಷ್ಟಿಯಲ್ಲಿ ನೀಲಮ್ಮ :

1. ಕಿನ್ನರಿ ಬ್ರಹ್ಮಯ್ಯ : 'ನೀಲಮ್ಮನ ದಾದದಿಂದ ಲಿಂಗಪೂಜೆಯ ಸಂಪತ್ತು
2. ಗಣದಾಸಿ ವೀರಣ್ಣ :

" ಬಸವ ನೀಲಲೋಚನೆ ಇಬ್ಬರ ನಾಮ ಕೂಡಲು ಯೆಂಟಕ್ಷರವಾದವು

ಆ ಎಂಟಕ್ಷರವೇ ಮಾಯಾಖ್ಯ ಪಂಚಾಕ್ಷರವಾದವು
ಆ ಎಂಟಾಕ್ಷರವೇ ಎನ್ನ ಅಷ್ಟದಳ ಕಮಲದೊಳಗೆ
ಇಷ್ಟಲಿಂಗವಾಗಿ ನಿಂದ ನಿಲವ ತೋರಿದಾತ
ನಮ್ಮ ಶಾಂತಕೂಡಲ ಸಂಗಮದೇವಾ. ”

3. ಶಿವಯೋಗಿ ಸಿದ್ಧರಾಮ :

“ ಎಮ್ಮಪ್ಪ ಬಸವಣ್ಣ ಎಮ್ಮವ್ವೆ ನೀಲಮ್ಮ
ಎಮ್ಮಯ್ಯ ಪ್ರಭುರಾಯ.... ”
“ ಹೆತ್ತವ್ವ ನೀಲಮ್ಮ ಮುತ್ತವ್ವೆ ಮಹಾದೇವಿ”

4. ಅಕ್ಕಮಹಾದೇವಿ :

‘ ಅವ್ವ ನೀಲವ್ವನ ಮೋಹದ ಮಗಳು
ಅಪ್ಪ ಬಸವಣ್ಣನ ಸುಚಿತ್ತದ ಪುತ್ಥಳಿಯಾಗಿ ”

5. ಬಾಲಬೊಮ್ಮಣ್ಣ :

“ ಲಿಂಗದಲ್ಲಿ ನಿರ್ವಯಲಾದರಯ್ಯಾ
ನೀಲಲೋಚನೆಯಮ್ಮ......”

6. ಪ್ರಭುದೇವರು :

“ ಇಷ್ಟಲಿಂಗದ ನಿಲವ ನೀಲಾಂಬಿಕೆಯು ಬಲ್ಲಳು ”

‘ ಅಣ್ಣ ಬಸವಣ್ಣನವರೇ ಪೃಥ್ವಿಗಗ್ಗಳಿ ಚಲುವೆ ನೀಲಲೋಚನೆ ’ ಎಂಬ ಮಾತನ್ನು ತಮ್ಮದೊಂದು ವಚನದಲ್ಲಿ ಉದ್ಗರಿಸಿದ್ದಾರೆ. ಜಾನಪದ ಕವಿಚಕ್ರವರ್ತಿ ಸರ್ವಜ್ಞನು ತನ್ನ ವೀರಗಣ ಸ್ತೋತ್ರದ ವಚನಗಳಲ್ಲಿ ನೀಲಾಂಬಿಕೆಯನ್ನು ತನ್ನ ತಾಯಿ ಎಂದು ಮನದುಂಬಿ ಹಾಡಿಹೊಗಳಿದ ತ್ರಿಪದಿಗಳಿವೆ. ರಸಋಷಿ ಮುಪ್ಪಿನ ಶಿವಯೋಗಿಗಳು ಮಹಾಕವಿ ಷಡಕ್ಷರಿ ಮೊದಲಾದವರು ನೀಲಾಂಬಿಕೆಯ ಸ್ತೋತ್ರಗಳನ್ನು ತಮ್ಮ ಕಾವ್ಯಗಳಲ್ಲಿ ಒಡಮೂಡಿಸಿದ್ದಾರೆ.

ಮಹಾಕವಿ ಷಡಕ್ಷರಿಯಂತೂ ನೀಲಾಂಬಿಕಾ ಸ್ತೋತ್ರವನ್ನು ಬಹು ಸೊಗಸಾಗಿ ರಚಿಸಿದ್ದಾನೆ. ಕೆಲವು ಸ್ತೋತ್ರ ಪದ್ಯಗಳ ಸಾಲುಗಳಿವು :



“ ಸತ್ಯಾನಂದಮಯಿಂ ಸಮುಜ್ವಲ ಮಹಾಲಿಂಗ....
ಪ್ರಭಾಸಂಗತಾಂ
ಭಕ್ತ್ಯಾ ಸ್ವಾಮಿ ವೃಷಾಧಿರಾಜರಮಣೀಂ ನೀಲಾಂಬಿಕಾಮನ್ವಹಮ್.
ಚೋಚಕ್ಕದುಗ್ಗಳೆಯು
ನೀಲಲೋಚನೆ ಚೆಲ್ವ
......................
ನಮಗಿನ್ನು ಸರಿಯದಾರು ( ಸುಭೋಧಸಾರ ಪುಟ-22 )

ಬಾಲಲೀಲಾಮಹಾಂತ ಶಿವಯೋಗಿಗಳಂತೂ ತಮ್ಮ ಕೈವಲ್ಯ ದರ್ಪಣದಲ್ಲಿ ನೀಲಾಂಬಿಕೆಯನ್ನು ಬಾರಿಬಾರಿಗೆ ಸ್ಮರಿಸಿಕೊಂಡಿದ್ದಾರೆ.

“ ಅಸಮ ಪರತರ ಗೌರಿ ಮಹಾದೇವಿ ಮುಕ್ತಾಯಿ
ವ್ಯಸನಳಿದ ನೀಲಮ್ಮ ಮುಖ್ಯ ತಾಯಿಗಳು ”
‘ ಬಾರೆ ಮುಕ್ತಾಯಕ್ಕಾ ಬಾರೆ ಮಹಾದೇವಿ
ಬಾರೆ ಬಸವನ ರಾಣಿ ನೀಲಲೋಚನೆಯೆ ”
“ ಎತ್ತಿದಾರತಿಯ ಚಿತ್ತಜಾರಿಗೆ ಪರ
ಸತಿಯರ ನೀಲಾಂಬಿಕೆಗೆ ಸಮುಗಾಣ್ಬಗೆ ”

ಯೋಗಿಗಳ ಹೃದಯ ಮಂದಿರದಲ್ಲಿ ನೀಲಮ್ಮ ನೆಲೆಗೊಂಡಿರುವುದು ಮಹತ್ವದ ಅಂಶವೇ ಸರಿ. ಇದರಿಂದ ನೀಲಾಂಬಿಕೆಯ ಉತ್ತರ ಬಿತ್ತರ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ.

ವಚನಸಾಹಿತ್ಯ ಸೃಷ್ಟಿ :

“ ಅಲ್ಲಯ್ಯನ ವಚನ ಎರಡೆಂಬತ್ತು ಕೋಟಿ
ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ
ಗಂಗಾಂಬಿಕೆಯು ವಚನ ಲಕ್ಷದ ಎಂಟು ಸಾಸಿರ
ಎಮ್ಮಕ್ಕ ನಾಗಾಯಿಯು ವಚನ ಮೂರು ಲಕ್ಷದ ತೊಂಬತ್ತಾರು ಸಾಸಿರ”

ಎಂದಿರುವ ಸಿದ್ದರಾಮ ಶಿವಯೋಗಿಯ ವಚನದ ಆಧಾರದ ಮೇಲೆ ಹೇಳುವದಾದರೆ. ನೀಲಮ್ಮ ಲಕ್ಷದ ಮೇಲೆ ಹನ್ನೊಂದು ಸಾವಿರ ವಚನ ರಚಿಸಿದ್ದಾಳೆಂದು ಹೇಳಬಹುದಾದರೂ, ಇಂದು ನಮಗೆ ಕೇವಲ ಆಕೆಯ 125 ವಚನಗಳು ಉಪಲಬ್ಧವಾಗಿವೆ. 12 ಸ್ವರವಚನಗಳು ದೊರೆಯುತ್ತವೆ. ಈ ವಚನಗಳು ಅಧ್ಯಾತ್ಮಿಕ ಸಾಹಿತ್ಯ ಪ್ರಪಂಚದಲ್ಲಿ ಉನ್ನತಮಟ್ಟ ಪಡೆದಿವೆ. ನೀಲಮ್ಮನ ಅಪಾರ ಅನುಭವ ಅಮೃತವಿದೆ ಜೀವನಾನುಭವವೇ ಶಿವಾನುಭಾವವಾಗಿ ಲೋಕಾನುಭವವಾಗಿದೆ. ಜೀವನದ ನೋವಿದೆ. ಕಹಿ ಇದೆ : ಬಂದ ಕಷ್ಟಗಳನ್ನು ಎದುರಿಸಿ ಧೈರ್ಯ-ಸ್ಥೈರ್ಯಗಳ ನಿಲುವಿದೆ. ಶಿವಾನು

ಭವ ಸಂದೇಶವಿದೆ. ಚಿರಂತನ ಮಾನವೀಯ ಮೌಲ್ಯಗಳಿವೆ. ಈ ವಚನಗಳು ಕರುಣ ರಸದ ಮಡುಗಳಾಗಿವೆ. ಬಸವಣ್ಣನ ಬಹುಮುಖ ವ್ಯಕ್ತಿತ್ವದ ಸ್ಪಷ್ಟವಾದ ಪರಿಚಯವಾಗ ಬೇಕಾದರೆ ನೀಲಮ್ಮನ ವಚನಗಳನ್ನು ಪ್ರತಿಯೊಬ್ಬರೂ ಅವಶ್ಯವಾಗಿ ಅವಲೋಕಿಸಬೇಕು. ಬಸವನ ಬೆಳಗಿನಲ್ಲಿ ಸೂಳಿದ ಸೂಸಿದ ಬೆಳಸನ್ನು ಬಣ್ಣಿಸಿದ ಬಗೆಯಿದು :

" ಬೆಳಗಿನ ಪ್ರಭೆ ಥಳಥಳಿಸಿ ಹೊಳೆಯಲು
ಆ ಬೆಳಗಿನೊಳಗೆ ಬೆಳೆದ ಶಿಶುವಾನಯ್ಯ
ಕಳೆಯರಿಯದೆ ಬೆಳೆದೆನು
ತಿಳುಹಿಲ್ಲದೆ, ನಿಂದೆನು
ಸಂಗಯ್ಯನಲ್ಲಿ ಬಸವಾ ಬಸವಾ ಎನುತಿರ್ದೆನಯ್ಯಾ "

ಕರುಳಿನ ಬಳ್ಳಿ ತಪ್ಪಿದಲ್ಲಿ ತಿದ್ದಿ ತೀಡಿ ಮುನ್ನಡೆಸಿದ ಮಹಾನುಭಾವನನ್ನು ಕೃತಜ್ಞತೆಯಿಂದ ನೆನಸಿದ ಪರಿಯಿದು :

" ಅಂಡಜವಳಿದ ಬಸವಾ
ಪಿಂಡಜವಳಿದ ಬಸವಾ
ಆಕಾರವಳಿದ ಬಸವಾ
ನಿರಾಕಾರವಳಿದ ಬಸವಾ
ಸಂಗವಳಿದ ಬಸವಾ
ನಿಸಂಗವಳಿದ ಬಸವಾ
ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಬಸವಾ "

ಬಸವಣ್ಣನವರ ಬಣ್ಣನೆಯನ್ನು ಎಷ್ಟು ಮಾಡಿದರೂ ನೀಲಾಂಬಿಕೆಗೆ ತೃಪ್ತಿಯಿಲ್ಲ.

1) ನಿರಾಳ ಪ್ರಸನ್ನ ಮೂರ್ತಿಯಾದ ಬಸವಯ್ಯ
2) ಸಂಗಯ್ಯನಲ್ಲಿ ನಿಜಸುಖಿಯಾದ ಬಸವ
3) ನಿರಾಲಂಬಮೂರ್ತಿಯ ಇರುವು ಕಾಣಿಸಿತಯ್ಯಾ ಬಸವಾ
4) ಅಧಿಕ ತೇಜೋಮೂರ್ತಿ ಬಸವಾ
5) ಅನಾದಿ ತತ್ತ್ವಮೂರ್ತಿ ನೀನೇ ಬಸವಯ್ಯಾ

ಹೀಗೆ ಹಲವು ಹನ್ನೊಂದು ಬಗೆಯಲ್ಲಿ ತನ್ನ ಅಳಲನ್ನು ತೋಡಿಕೊಂಡಿದ್ದಾಳೆ, ತತ್ವವನ್ನು ಬಿತ್ತಿ ಬೆಳೆದಿದ್ದಾಳೆ.

ನೀಲಮ್ಮ ಬಸವಣ್ಣನವರನ್ನು ಅಗಲಿದಾಗ ಪ್ರಲಾಪಿಸಿದ ಅಳಲಿನ ವಚನಗಳಂತೂ ಅತ್ಯಂತ ಮನೋಜ್ಞವಾಗಿವೆ, ಮಾರ್ಮಿಕವಾಗಿವೆ. ಬಸವಣ್ಣ ಇಚ್ಛಾಮರಣಿಯೆಂಬುದನ್ನು ಸಾಬೀತುಪಡಿಸುತ್ತವೆ. ಬಸವಣ್ಣನ ಲಿಂಗೈಕ್ಯದ ಬಗೆಗಿನ ಸಂದೇಹ ಸಂದೋಹಗಳನ್ನು ದೂರಮಾಡುತ್ತವೆ.



ಕಾಯವಿಲ್ಲದ ಕರುಣಿ

"ಎಲೆಗೆಳೆದ ಮರದಲ್ಲಿ ನೆಳಲನರಸಲಿಲ್ಲ
ಕಳೆಯರಿತ ದೀಪದಲ್ಲಿ ಬೆಳಗನರಸಲಿಲ್ಲ
ಕುರುಹಳಿದ ಮೂರ್ತಿಯಲ್ಲಿ ರೂಪವನರಸಲಿಲ್ಲ
ಶಬ್ಧವಡಗಿ ನಿಃಶಬ್ಧವಾದ ಬಸವನಲ್ಲಿ ಶಬ್ಧವನರಸಲಿಲ್ಲ
ಸಂಗಯ್ಯನಲ್ಲಿ ಕಾಯವಿಲ್ಲದ ಕರುಣೆಯಾದೆ ನಾನು"

ಚನ್ನಬಸವಣ್ಣನ ನೆನಹು

ಎಸಳೆಸಳ ಹೊಸೆದು ನೋಡುವ ಯೋಗಿಗಳು
ಬಸವನೈಕ್ಯವನು ಕಾಣದಾದರು
ರೂಪ ನಿರೀಕ್ಷಿಸುವ ಯೋಗಿಗಳು ಬಸವನೈಕ್ಯವ ಕಾಣದಾದರು
ಸಂಗಯ್ಯನಲ್ಲಿ ನಿಮ್ಮ ಬಸವನೈಕ್ಯವ
ಬಲ್ಲಾತ ಚೆನ್ನಬಸವಣ್ಣನು"

ಬಸವಣ್ಣನೇ ಗುರು

ಬಸವಣ್ಣನೆ ಗುರುವೆಂದು ಭಾವಿಸಲಾಗಿ
ಎನಗೆ ಬಸವಣ್ಣನೆ ಗುರುವಾದನಯ್ಯಾ
ಚೆನ್ನಬಸವಣ್ಣನೆ ಲಿಂಗವೆಂದು ಭಾವಿಸಲಾಗಿ
ಎನಗೆ ಚೆನ್ನಬಸವಣ್ಣನೆ ಲಿಂಗವಾದನಯ್ಯಾ
ಪ್ರಭುದೇವರೆ ಜಂಗಮವೆಂದು ಭಾವಿಸಲಾಗಿ
ಎನಗೆ ಪ್ರಭುದೇವರೆ ಜಂಗಮವಾದನಯ್ಯಾ
ಜಿಲ್ಲಾಳದೇವನೆ ದೇಹವೆಂದು ಭಾವಿಸಲಾಗಿ
ಎನಗೆ ಜಿಲ್ಲಾಳದೇವನೆ ದೇಹವಾದನಯ್ಯಾ
ಇಹಃ ಪಗೆಯಾಂಡರೆ ಧನವೆಂದು ಭಾವಿಸಲಾಗಿ
ಎನಗೆ ಇಹಃ ಪಗೆಯಾಂಡರೆ ಧನವಾದನಯ್ಯಾ
ಇಂತೀ ಐವರ ಕಾರುಣ್ಯ ಪ್ರಸಾದವನುಂಡು
ಮಹಾಮನೆಯಲ್ಲಿ ಸುಖಿಯಾದೆ ಸಂಗಯ್ಯ"

ಸಂತೃಪ್ತಿ; ಸಮಾಧಾನ; ಸಮಚಿತ್ತ; ಸಹಿಷ್ಣುತೆ ಮೊದಲಾದ ಗುಣಗಳು ಇಲ್ಲಿ ವ್ಯಕ್ತವಾಗಿವೆ. "ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ" ಎಂಬ ಸರ್ವಜ್ಞನ ವಾಣಿಯಂತೆ ನೀಲಮ್ಮನು ಮಹಾನುಭಾವರ ಸಾನ್ನಿಧ್ಯದಲ್ಲಿ ಸುಖಿಯಾಗಿದ್ದಾಳೆಂಬುದನ್ನು ಈ ವಚನವೇ ಸಾರಿ ಸಾರಿ ಹೇಳುತ್ತದೆ.

ಅಲ್ಲಮ್ಮನ ಸಂಗ, ಅಜಗಣ್ಣನ ಸಂಗ
ಕಕ್ಕಯ್ಯನ ಸಂಗ, ಚಿಕ್ಕಯ್ಯನ ಸಂಗ
ಎಲ್ಲರ ಸಂಗ ಯತಿಗಳ ಸಂಗ, ಜತಿಗಳ ಸಂಗ
ಮಾನ್ಯರ ಸಂಗ, ಮುಖ್ಯರ ಸಂಗ,
ಸಂಗಯ್ಯ ಎನ್ನ ಸಂಗ, ಎನ್ನ ಬಸವಯ್ಯನ ಸಂಗ.

**ತೊತ್ತಿನ ಮಗಳು**

ನಾನು ನಿಮ್ಮವಳಲ್ಲವಯ್ಯಾ, ನಾನು ಅನಿಮಿಷನವರವಳು;
ನಾನು ನಿಮ್ಮವಳಲ್ಲವಯ್ಯಾ, ನಾನು ಅಜಗಣ್ಣನವರವಳು;
ನಾನು ನಿಮ್ಮವಳಲ್ಲವಯ್ಯಾ, ನಾನು ಪ್ರಭುವಿನ ಸಂತತಿಯವಳು;
ನಾನು ನಿಮ್ಮವಳಲ್ಲವಯ್ಯಾ, ನಾನು ಮಾದಾರಚೆನ್ನಯ್ಯನ ಮೊಮ್ಮಗಳು;
ನಾನು ನಿಮ್ಮವಳಲ್ಲವಯ್ಯಾ, ನಾನು ಪ್ರಸಾದಿಗಳ ಮನೆಯಕೀಳು ದೊತ್ತು;
ನಾನು ನಿಮ್ಮವಳಲ್ಲವಯ್ಯಾ, ನಾನು ಬಸವನ ಮನೆಯ ತೊತ್ತಿನ ಮಗಳು.

ಇದರಿಂದ ಆಕೆ ವಿನಯದ ಸಾಕಾರ ಮೂರ್ತಿಯಾಗಿದ್ದಳು; ಸೌಜನ್ಯದ ಪ್ರತೀಕವಾಗಿದ್ದಳು. ಕಿಂಕರ ಕಿಂಕರಳಾಗಿದ್ದಳೆಂದು ಹೇಳಬಹುದಾಗಿದೆ. ಪ್ರತಿಯೊಂದರಲ್ಲಿ ಅಣ್ಣನವರ ಪಡಿನೆಳಲಾಗಿ ಬೆಳಗಿದ ಸುಸಂಸ್ಕೃತ ಸಹೃದಯಿ, ನೀಲಮ್ಮನದು.

**ಶಿವಾನುಭವದ ಗೌರಿಶಿಖರ**

"ಮಡದಿಯೆನ್ನಲಾಗದು ಬಸವಂಗೆ ಎನ್ನನು
ಪುರುಷನೆನ್ನಲಾಗದು ಬಸವನು ಎನಗೆ
ಉಭಯ ಕುಳವಹರಿದು ಬಸವಂಗೆ ಶಿಶುವಾನಾದೆನು
ಬಸವನೆನ್ನ ಶಿಶುವಾದನು
ಪ್ರಮಥರು ಪುರಾತನರು ಸಾಕ್ಷಿಯಾಗಿ
ಸಂಗಯ್ಯನಿಕ್ಕಿದ ದಿವ್ಯವ ಮೀರದೆ ಬಸವನೊಳಗಾನಡಗಿದೆ"

ಬಸವಣ್ಣ ನೀಲಮ್ಮನ ಶಿಶು, ನೀಲಮ್ಮ ಬಸವಣ್ಣನ ಶಿಶು. ಇದೆಂತಹ ಸಾಮರಸ್ಯವಿದು. ಲೌಕಿಕ ದಾಂಪತ್ಯವೆಂಬುದು ಇದಕ್ಕಾಗಿಯೇ. ಶಿವಾನುಭವದ ತುತ್ತತುದಿಯನ್ನೇರಿದವರಿಗೆ ಮಾತ್ರ ಈ ಭಾವ ಬರಲು ಸಾಧ್ಯ. ಸತಿ – ಪತಿ – ಭಾವ ಮಾಯವಾಗಿದೆ. ಲಿಂಗಬೇರೆಯಲ್ಲ, ಬಸವ ಬೇರೆಯಲ್ಲವೆಂಬ ಭಾವ ಬಲಗೊಂಡಿದೆ; ಈ ಲಿಂಗದೇವರ ಲಾಲನೆ ಪಾಲನೆ ಮಾಡುವ, ನೀಲಮ್ಮನ ಭಾವದಲ್ಲಿ ಸಹಸ್ರಾರು ಭಾವಗಳು ಉಕ್ಕಿಬಂದಿವೆ.

"ಉಭಯ ದೃಷ್ಟಿಯಿಂದ ದೃಷ್ಟವಕಾಂಬಂತೆ
ದಂಪತಿ ಏಕೋಭಾವವಾಗಿ ನಿಂದಲ್ಲಿ



ಗುಹೇಶ್ವರ ಲಿಂಗದಲ್ಲಿ ಅರ್ಪಿತವಾಯಿತು"
ಎಂಬ ಪ್ರಭುದೇವರ ವಾಣಿಯ ಸತ್ಯ ಸಾಕ್ಷಾತ್ಕಾರವೇ ಈ ದಾಂಪತ್ಯ ಜೋಡಿ.

**ಇದೊಂದು ಪಾರಮಾರ್ಥಿಕ ಸಂಸಾರ**

"ಎನಗೆ ಲಿಂಗವು ನೀವೇ ಬಸವಯ್ಯ
ಎನಗೆ ಸಂಗವು ನೀವೇ ಬಸವಯ್ಯ
ಎನಗೆಪ್ರಸಾದವು ನೀವೇ ಬಸವಯ್ಯ
ಎನಗೆ ಪ್ರಭೆಯ ಮೂರ್ತಿಯು ನೀವೇ ಬಸವಯ್ಯ
ಎನಗೆ ಸಂಗಯ್ಯನು ನೀವೇ ಬಸವಯ್ಯ"

ಈ ವಚನವನ್ನು ಪರಿಶೀಲಿಸಿದರೆ ಮೇಲಿನ ಮಾತು ಇನ್ನೂ ದೃಢಗೊಳ್ಳುತ್ತದೆ. ಪತಿಯೇ ಸರ್ವಸ್ವ, ಪತಿದೇವರೇ ಪ್ರಾಣ.

**ಧೈರ್ಯ–ಸ್ಥೈರ್ಯಗಳ ಮೇರುಗಿರಿ**

"ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ,
ನಾನಾರ ಹೊಂದುವೆನೆಂದು ಭ್ರಮೆಪಡಲೇಕಯ್ಯ
ಪರಿಣಾಮ ಮೂರ್ತಿ ಬಸವನರೂಪು
ಕರಸ್ಥಳದಲ್ಲಿ ಬೆಳಗಿದ ಬಳಿಕ
ಸಂಗಯ್ಯನ ಹಂಗು ನಮಗೇಕಯ್ಯ"
"ಎನಗಿನ್ನೇನು ಎನಗಿನ್ನೇನು ಎನ್ನಯ್ಯನೈಕ್ಯವನೈದಿದ ಬಳಿಕ
ಎನಗೆ ಕಾಯವಿಲ್ಲ, ಎನಗೆ ಪ್ರಾಣವಿಲ್ಲ
ಎನಗೆ ಹೃದಯದ ಹಂಗು ಹರಿದು
ಪರಿಣಾಮ ಪ್ರಸಾದಿಯಾದೆನಯ್ಯ ಸಂಗಯ್ಯ"

ಮೇಲಿನ ವಚನಗಳು ಆಕೆಯ ಮನೋಧರ್ಮಕ್ಕೆ ಕನ್ನಡಿ ಹಿಡಿದಿವೆ.

**ಒಂದೇ ಸ್ವರ ವಚನದಿಂದ ಪ್ರಾಜ್ಞರ ಗಮನ**

"ನೋಡು ನೋಡು ನೋಡು ನೋಡು ನೋಡು ಲಿಂಗನೆ
ಬಸವಣ್ಣನವರು ಮಾಡಿದಾಟವ"

—ಎಂಬ ಒಂದೇ ವಚನದಿಂದ ನೀಲಲೋಚನೆ ಪ್ರಾಜ್ಞರ ತೀವ್ರ ಗಮನ ಸೆಳೆದಿದ್ದಾಳೆ. ಜಗತ್ತಿನ ಯಾವ ಸಾಹಿತ್ಯದ ಇತಿಹಾಸದಲ್ಲಿಯೂ ಈ ಬಗೆಯ ಭಾವಗಳನ್ನು ಎತ್ತಿ ಹಿಡಿದ ವಚನಮಾಲೆ ದೊರಕುವುದು ಬಹು ವಿರಳವೆಂದಿದ್ದಾರೆ.

ಕೆ. ಬಿ. ಪ್ರಭುಪ್ರಸಾದ. ಈ ವಚನ ಮಾಲೆಯಲ್ಲಿ ನೀಲಮ್ಮನ ಪ್ರತಿಭೆ ಗರಿಗೆದರಿದೆ, ಪಾಂಡಿತ್ಯ ಮಿಂಚಿದೆ, ಅನುಭವ ಹಳಚಿದೆ. ದುಃಖದ ಕೋಡಿ ಹರಿದರೂ ವೀರಶೈವ ಸಿದ್ಧಾಂತವನ್ನು ದೃಢವಾಗಿ ಅಪ್ಪಿಕೊಂಡಿದ್ದಾಳೆ, ಒಪ್ಪಿಕೊಂಡಿದ್ದಾಳೆ.

"ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹ ಒಡೆಯರಿಗಿದು ತರವೇ ?" ಎನ್ನುವ ಸವಾಲು ಆಕೆಯು ಎಂಟೆದೆಯ ಬಂಟಿಯಾಗಿದ್ದಳೆಂಬುದಕ್ಕೆ ಸಾಕ್ಷಿ. ಬಸವಣ್ಣನವರನ್ನು ಕರಸ್ಥಳದತಸೀ ಕಂಡ ಹಿರಿಮೆ ಅವಳದು. ಇದರಿಂದಾಗಿ ಆಕೆಯ ಗೌರವ, ಘನತೆ ಹೆಚ್ಚಿದೆ. ಅವಿಸ್ಮರಣೀಯಳಾಗಿ ಬೆಳಗಿದ್ದಾಳೆ.

**ಸ್ವರ ವಚನಗಳು**

ನೀಲಮ್ಮನ ಸುಮಾರು 12 ಸ್ವರವಚನಗಳು ಇದೀಗ ಉಪಲಬ್ಧವಾಗಿವೆ. ಇವುಗಳಲ್ಲಿ ವೀರಶೈವ ಧರ್ಮ ಸಿದ್ಧಾಂತವನ್ನು ಮನೋಜ್ಞವಾಗಿ ಪ್ರತಿಪಾದಿಸಲಾಗಿದೆ. ಆಕೆಯ ಅಪಾರ ಜ್ಞಾನದ ಇನ್ನೊಂದು ಮುಖವನ್ನು ಇವುಗಳಲ್ಲಿ ಕಾಣಬಹುದು. ಮಹಾಮನೆಯ ಅನ್ನಪೂರ್ಣೆಯಾಗಿ ನಾಡಿನ ನಾಲ್ಕು ನಿಟ್ಟಿನಿಂದ ಬಂದ ಶರಣೆಯರಿಗೆಲ್ಲ ಮಹಾಮಾತೆಯಾಗಿ ಅವರಿಗೆಲ್ಲರಿಗೂ ಸೂಕ್ತ ಮಾರ್ಗದರ್ಶನ ಮಾಡುವ ಜವಾಬ್ದಾರಿಯೂ ಅವಳ ಮೇಲಿತ್ತು. ಅವರೆಲ್ಲರನ್ನೂ ಶಿವಾನುಭವದ ತತ್ತ್ವಗಳ ಕಡೆಗೆ ಸೆಳೆಯುವಂತೆ ನೋಡಿಕೊಂಡಳು. ನೀಲಮ್ಮನೇ ಅಷ್ಟಾವರಣಗಳಲ್ಲಿ ಒಂದಾದ ರುದ್ರಾಕ್ಷಿಯ ಮಹತ್ವವನ್ನು ಪೂರ್ವಾಶ್ರಯ ನಿರಸನವಾಗಿ ಲಿಂಗದೀಕ್ಷೆಯಾದ ನಂತರ ನಿಜಭಕ್ತನಾಗುವ ಸೊಗಸಾದ ವಿಚಾರಶ್ರೇಣಿಯಿದು.

"ಕ್ಷೀರದಿಂದಾದ ತುಪ್ಪ ಕ್ಷೀರವಪ್ಪುದೇ ?
ನೀರೊಳಾದ ಮುತ್ತು ಮರಳಿ ಉದಕವಪ್ಪುದೇ ?
ಮೀರಿ ಪೂರ್ವಕರ್ಮವನ್ನು ಹರಿದ ಭಕ್ತಗೆ ಬೇರೆ ಮತ್ತೆ
ಜನ್ಮವುಂಟೆ ಲಿಂಗವಲ್ಲದೆ ?"

ಒಂದೇ ಜನ್ಮದಲ್ಲಿ ಮುಕ್ತಿ ಪಡೆಯುವ ಹವಣಿಕೆಯನ್ನು ಇಲ್ಲಿ ಹಿತ-ಮಿತವಾಗಿ ಎತ್ತಿ ತೋರಿಸಲಾಗಿದೆ. ಹೀಗೆ ತನ್ನ ಬಹುಮುಖ ವ್ಯಕ್ತಿತ್ವದಿಂದ ಕಲ್ಯಾಣದ ಅನುಭವ ಮಂಟಪದ ಶಿವಶರಣೆಯರಲ್ಲಿ ಅಗ್ರಗಣ್ಯಳಾಗಿ, ಅಗ್ರಮಾನ್ಯಳಾಗಿ ಬೆಳಗಿದ ನೀಲಮ್ಮನವರ ಜೀವನ ನಿಜವಾಗಿಯೂ ಸ್ಫೂರ್ತಿದಾಯಕ; ಚೈತನ್ಯದಾಯಕ. ತೇಜಸ್ವಿನಿ, ಓಜಸ್ವಿನಿ, ತಪಸ್ವಿನಿಯಾದ ಅವಳ ಬಂಗಾರದಂತಹ ಬದುಕು ಇಂದಿಗೂ ಅನುಕರಣೀಯವಾಗಿದೆ; ಆದರ್ಶಮಯವಾಗಿದೆ. ತಂಗಿ ಅಡಗಿದ ಊರು ತಂಗಡಗಿ ಎಂಬುದೊಂದು ಕೂಡಲಸಂಗಮದ ಕೃಷ್ಣಾನದಿಯ ಆಚೆಯ ದಂಡೆಯ ಮೇಲಿದೆ. ಅಲ್ಲಿಯೇ ನೀಲಾಂಬಿಕೆ ಐಕ್ಯಳಾದಳೆಂಬ ಪ್ರತೀತಿ ಇದೆ. ಅದರ ಸ್ಮಾರಕವಾಗಿ ಅಲ್ಲೊಂದು ನೀಲಮ್ಮನ ದೇವಾಲಯವೂ ಕಂಗೊಳಿಸುತ್ತದೆ.

●



# ಅತೀಂದ್ರಿಯ ಅನುಭವ [ಸಮೀಕ್ಷೆ]

— ಬಿ. ಎಸ್. ಕೃಷ್ಣಮೂರ್ತಿ
ನಂ 5, ಸೀತಾವಿಲಾಸ ರಸ್ತೆ, ಮೈಸೂರು - 570001.

ಪ್ರಾಜ್ಞರು ಮಾತ್ರವಲ್ಲ; ಅತಿ ಸಾಮಾನ್ಯರೂ ತರ್ಕ ವಿತರ್ಕ ಮಾಡುವಾಗ ಅತೀಂದ್ರಿಯ ಜ್ಞಾನವಿಮರ್ಶೆ ಬಾರದಿರುವುದಿಲ್ಲ. ಇದರ ವಿಷಯ ತಿಳಿಯಲು ಕುತೂಹಲವೂ ಕೆರಳುತ್ತದೆ ನಿಜ!

**ಅತೀಂದ್ರಿಯ ಜ್ಞಾನವೆಂದರೇನು ?**

ಇದು ಸಾಮಾನ್ಯವಾಗಿ ಮನಸ್ಸಿನ, ವಿಚಿತ್ರ ಸ್ಫೂರ್ತಿಯಿಂದ ಉಂಟಾದ ಅವ್ಯಕ್ತ ಅನುಭವ! ಇದನ್ನು ಹೊಂದಿದ ವ್ಯಕ್ತಿ ಸ್ತ್ರೀಯಾಗಲಿ, ಪುರುಷನಾಗಲಿ ತಾನೊಬ್ಬಳು, ಅಥವಾ ಒಬ್ಬ ದೇವರಿಂದ ಪ್ರೇರಿತನಾದ ಜ್ಞಾನಿ ಅಥವಾ ಸಿದ್ಧಪುರುಷ ಯಾ ಸ್ತ್ರೀಯಂತೆ ನುಡಿಯುತ್ತಾನೆ – ನುಡಿಯುತ್ತಾಳೆ. ಹೀಗೆ ನುಡಿಯಲು ಕುಲ ಪಂಗಡ, ವಯಸ್ಸುಗಳ ವಿರೋಧವಾಗಲೀ, ಸಮಯಾಸಮಯಗಳಾಗಲೀ, ತಾರತಮ್ಯಗಳಾಗಲೀ ಉಂಟಾಗದು. ಅವ್ಯಕ್ತ ಅಂದರೆ ಅತೀಂದ್ರಿಯ ಪ್ರಜ್ಞೆ ಮೂಡಿದವನಿಗೆ ಮಿಂಚಿನಂತೆ ಏನೋ ಹೊಳೆಯುತ್ತದೆ ಅಘಟನಾ ಶಕ್ತಿ ಮನಸ್ಸಿನಲ್ಲಿ ಸಂಚಾರವಾಗಿ ಭ್ರಮೆಗೊಂಡವನಂತೆ ಮಾತನಾಡುತ್ತಾನೆ. ಮಾತು ಕೇಳಿದವರಿಗೆ ವಿಚಿತ್ರವಾಗಿ ತೋರುವುದು. ಇದು ನಿಜವೋ ಅಥವಾ ಸುಳ್ಳೋ ತಿಳಿಯುವ ಕುತೂಹಲ ಉಂಟಾಗದಿರುವುದಿಲ್ಲ.

ಹೀಗೆ ಸ್ಫೂರ್ತಿಹೊಂದಿದ ವ್ಯಕ್ತಿಯ ಮಾತುಗಳು ನಿಜವೋ ಸುಳ್ಳೋ ತಿಳಿಯುವುದಕ್ಕೆ ಕುತೂಹಲವುಂಟಾದಾಗ "ಇವನು ಏತಕ್ಕಾಗಿ ಅಜ್ಞಾನಿಯಂತೆ ಹುಚ್ಚುಹುಚ್ಚಾಗಿ ಮಾತನಾಡುತ್ತಾನೆ/ತ್ತಾಳೆ ಎಂಬ ಅಭಿಪ್ರಾಯ ಮೂಡಿಬರುತ್ತದೆ. ಇದು ಹುಚ್ಚು ಹಿಡಿಯಲು ಪ್ರಥಮ ಕಾಂಡವೇನೋ ಎಂಬ ಸಂಶಯ ಬಾರದಿರುವುದಿಲ್ಲ.

ಅತೀಂದ್ರಿಯ ಪ್ರಜ್ಞೆ ಬಂದು ಆಡಿದವನ ಮಾತಿನ ಶೈಲಿ, ವಿಧಾನ, ದೃಢತೆ ಯಾರಿಗಾದರೂ ಸತ್ಯತೆಯನ್ನು ತಿಳಿಯುವ ಆಸೆ ಮೂಡದಿರುವುದಿಲ್ಲ. ಈ ಪ್ರಜ್ಞೆ ಬಂದಾತನನ್ನು ಪ್ರೋತ್ಸಾಹಿಸಿ ಕೇಳಿದಾಗ, ಅವನು ತನ್ನ ವಾದವನ್ನು ಪುಷ್ಟೀಕರಿಸಿ ನಿಜವನ್ನು ಬಯಲು ಮಾಡುತ್ತಾನೆ. ನೋಡಿ ಬನ್ನಿ ಎಂದು ಆವೇಶದಿಂದ ಬರುತ್ತಾನೆ ಈಗ ಉದಾಹರಣೆಗಳು ಎಷ್ಟೋ ಇವೆ.

ಅತೀಂದ್ರಿಯ ಪ್ರಜ್ಞೆ ಮೂಡಿದ ಒಬ್ಬ ಮಗನಿದ್ದ. ಅವನು ಪದೇ ಪದೇ ತನ್ನ ತಂದೆಗೆ ಹಿಂಸಿಸುತ್ತಿದ್ದ. ಹಿಂಸೆಯನ್ನು ತಾಳಲಾರದ ತಂದೆ ಮಗನನ್ನು ಕೇಳಿದ,

"ಮಗನೇ ನಿನ್ನ ಮಾತೇನಿದೆ ಹೇಳು, ಏತಕ್ಕೆ ನನಗೆ ಉಪದ್ರವ ಕೊಡುತ್ತೀ ?
ಮಗ ತಂದೆಗೆ ಉತ್ತರಿಸಿದ;
ಅಪ್ಪಾ! ನಾನು ಕೆಲವು ವರ್ಷಗಳ ಹಿಂದೆ ಸಾಗರವೆಂಬ ಊರಿನಲ್ಲಿದ್ದವನು. ಆಗ ಬದುಕಿದ್ದ ಮುದ್ದೇಗೌಡನ ಮಗನೇ ನಾನು !
ತಂದೆ ಆಡಿದ, 'ಆಯಿತಾಯಿತು, ಮುಂದೆ ?
ಮಗ ಹೇಳಿದ, "ನನಗೆ ಆ ಊರಿನ ದೊಡ್ಡಕುಳ ನಂಜೇಗೌಡನ ಮಗಳೊಡನೆ ಲಗ್ನವಾಯ್ತು. ಹುಡುಗಿ ಹೆಸರು ಕೆಂಪಿ"
ಆಮೇಲೆ ?

ನಾನು ಅವಳೊಡನೆ ಕೆಲವು ಕಾಲ ಸಂಸಾರ ಮಾಡಿದೆ. ನನಗೊಬ್ಬ ಮಗ ಹುಟ್ಟಿದ. ಅವನು ಬೆಳೆದು ಹದಿನಾಲ್ಕು ವರ್ಷ ಕಳೆದಿತ್ತು."
'ಚೆನ್ನಾಗಿದೆ ನಿನ್ನ ಕಥೆ' ಅಪ್ಪನೆಂದ, ಮಗ ಆಗ, –
"ಇನ್ನೂ ಕೇಳಪ್ಪಾ ಹೇಳ್ತೀನಿ, ನಾನೊಂದು ದಿನ ಹುಲ್ಲು ಕೊಯ್ತಿದ್ದೆ. ಏನೋ ಕಚ್ಚಿದ ಹಾಗಾಯ್ತು. ಪ್ರಜ್ಞೆ ಹೋದಂತಾಯ್ತು. ಕೂಗಿಕೊಂಡೆ, ಕೆಳಗೆ ಬುಸು ಗುಟ್ಟುತ್ತಿದ್ದ ನಾಗಸರ್ಪ! ಹಾಗೆಯೇ ಮಾಯವಾಯ್ತು. ಕೊಲ್ಲಲು ನನಗೆ ಆಗಲೇ ಇಲ್ಲ. ಬಾಧೆ ತುಂಬಾ ಇತ್ತು. ಆಗ ನನ್ನ ಮಗ ಉಣ್ಣಲು ನನಗೆ ಮನೆಯಿಂದ ಊಟದ ಬುತ್ತಿ ತಂದಿದ್ದ.
'ಚೆನ್ನಾಗಿದೆ ನಿನ್ನ ಕತೆ, ಆಮೇಲೇನಾಯ್ತು' ?
"ಅಪ್ಪಾ ಕೇಳು, ಆ ನನ್ನ ಮಗ ಚೊಂಬು ಹಿಡಿದು ಏತದ ಬಾವಿಯಿಂದ ನೀರು ತರುತ್ತೇನೆಂದು ಅಂದಿದ್ದು ಕೇಳಿಸಿತು. ನನಗೆ ಹಾವು ಕಚ್ಚಿದ್ದು ತಿಳಿಯದು. ಪ್ರಜ್ಞೆ ತಪ್ಪಿ ಬಿದ್ದುಬಿಟ್ಟೆ. ಆಮೇಲೇನಾಯಿತೋ ತಿಳಿಯದು. ಒಟ್ಟಿನಲ್ಲಿ ನಾನು ಸಾಯು ತ್ತಿದ್ದೆನೆಂಬುದು ನಿಜ. ಆ ಹಿಂದಿನ ಜನ್ಮದ ಜನ ಈಗಲೂ ಸಾಗರದಲ್ಲಿದ್ದಾರೆ. ಬಂದರೆ ತೋರಿಸುತ್ತೇನೆಂದು ಹೇಳಿದ.

ತಂದೆಗೆ ಕುತೂಹಲ ಕೆರಳಿತ್ತು. ನಿಜಾಂಶ ತಿಳಿಯಲು ಮಗನೊಡನೆ ಸಾಗರಕ್ಕೆ ಹೋದ. ಮಗನು ಅದೇ ಊರಿನ ನಿಜವಾದ ಪ್ರಜೆಯಂತೆ ಯಾವುದೋ ಮನೆಗೆ ನುಗ್ಗಿದ. ತಂದೆ ಹಿಂದೆಯೇ ಹೋದ. ಹುಡುಗನು ಒಳಗಿದ್ದ ಜನರನ್ನು ನೋಡಿ ಅವರ ಹೆಸರನ್ನು ಉಚ್ಚರಿಸಿದ. ಅವರನ್ನು, "ನಿಮ್ಮ ಹಿರಿಯರ ಹೆಸರು ಇದಲ್ಲವೇ ? ಅವರ ಮಕ್ಕಳು ಮೊಮ್ಮಕ್ಕಳುಗಳ ಹೆಸರುಗಳು ಇವೇ ಅಲ್ಲವೇ ? ಎಂದು ಹೇಳಿದ, ಅವರನ್ನು ಕುರಿತು.

ನಾನು ಹಿಂದಿನ ಜನ್ಮದಲ್ಲಿ ನಿಮ್ಮ ವಂಶಕ್ಕೆ ಸೇರಿದವನೇ ! ಎಂದು ವರ್ಣಿಸಿದ. ಆ ಮನೆಯ ಜನರು ಆಶ್ಚರ್ಯಪಟ್ಟು ಹೌದೆಂದು ಒಪ್ಪಿಕೊಂಡರು. ತಂದೆಗೆ ಅನು ಮಾನ ಪರಿಹಾರವಾಯಿತು.



ಸಿದ್ದಗಂಗಾ

ಇದು ಅತೀಂದ್ರಿಯದ ಲಕ್ಷಣವೆಂದು ತಿಳಿಯುವುದಿಲ್ಲವೇ ? ಈಗ ಈ ವಿಜ್ಞಾನ ಪ್ರಪಂಚದಲ್ಲಿ ಕುತೂಹಲಕಾರಿ ಪ್ರಯೋಗಗಳು ನಡೆಯುತ್ತಿರುತ್ತವೆ. ಮುಂದೆ ಎಂದಾದರೊಂದು ದಿನ ಅತೀಂದ್ರಿಯ ಪ್ರಜ್ಞೆಯ ವೈಚಾರಿಕ ಸಂಶೋಧನೆಗಳು ನಡೆದು ಅದರ ಮೂಲ ಕಾರಣಗಳು ಬಳಕೆಗೆ ಬಾರದಿರುವುದಿಲ್ಲ. ಇದನ್ನು ನಿಜವೆಂದು ಗ್ರಹಿಸ ಬಹುದು. ಅದರ ಪ್ರತಿಕ್ರಿಯೆಯೂ ಗೋಚರವಾಗದಿರದು.

ಈಗ ದೂರದೇಶಗಳಿಗೆ ಹೋಗಬೇಕಾಗಿಲ್ಲ. ನಮ್ಮೀ ಭಾರತದಲ್ಲೇ ಇರುವ ಶ್ರೀಮತಿ ಶಕುಂತಲಾ ದೇವಿಯವರು 'ಅದ್ಭುತ ಸಂಖ್ಯಾಗಣಕ ಯಂತ್ರ'ವೆಂದು ಎಲ್ಲೆಲ್ಲೂ ಪ್ರಖ್ಯಾತವಾಗಿದ್ದಾರೆ. ವಿದ್ಯಾ ಪರಿಣತರು ಕೇಳುವ ಗಣಿತದ ಲೆಕ್ಕಕ್ಕೆ ಉತ್ತರ ಕ್ಷಣದಲ್ಲೆ ಉತ್ತರ ದಂಗು ಪಡಿಸುತ್ತಿರುವುದು ಯಾವುದರ ಲಕ್ಷಣ ? ಕೇಳಿದವರೆಲ್ಲಾ ಸ್ಥಂಭೀಭೂತರಾಗಿರುವುದು ಅತೀಂದ್ರಿಯ ಜ್ಞಾನದ ಶಾಖೆಯೆಂದು ಊಹಿಸಬಹುದು.

ಬೇರೆಯವರು ಲೆಕ್ಕವನ್ನು ಮಾಡಿ ಸರಿಯುತ್ತರ ನೀಡುವುದು ಕೆಲವು ವೇಳೆ ಯಾಗುವುದು ಸಹಜ. ಏಕೆಂದರೆ ಲೆಕ್ಕವನ್ನು ಕೂಡಿ, ಕಳೆದು, ಗುಣಿಸಿ, ವಿಭಾಗಿ ಸುವುದಕ್ಕಾದರೂ ವೇಳೆ ತೆಗೆದುಕೊಳ್ಳುತ್ತದೆ. ಆದರೆ ಶ್ರೀಮತಿ ಶಕುಂತಲಾದೇವಿ ಯವರಿಗೆ ಈ ದೇಹಶ್ರಮವು ಇಲ್ಲದೆ ತಕ್ಷಣವೇ ಸರಿಯುತ್ತರ ಕೊಡುವ ಈ ಶಕ್ತಿ ಹೇಗೆ ಬಂದಿತು ಎಂಬುದನ್ನು ತಿಳಿಯುವುದೇ ಒಂದು ಅಚ್ಚರಿಯ ಸಂಗತಿ !

ಇನ್ನೊಂದು ಉದಾಹರಣೆ ಇಲ್ಲಿದೆ. ಒಬ್ಬ ಮಾನಸಿಕ ಅಂತರ್ಯ ಪ್ರಜ್ಞೆಯುಳ್ಳ ವನು ಯಾವನಾದರೂ ಕಲ್ಮಷ ಮನಸ್ಸುಳ್ಳವನೆಂದು ತಿಳಿದಾಗ ಇದ್ದಕ್ಕಿದ್ದಂತೆಯೇ ಆ ಮನುಷ್ಯ ಅತಿಕಾಮಿಯೆಂದು ಹೇಳಿ ದಂಗುಪಡಿಸುತ್ತಾನೆ. ಅದನ್ನು ಯಾರಾದರೂ ಉದ್ದೇಶಪೂರ್ವಕವಾಗಿ ಕೆದಕಿ ನೋಡಿದರೆ ಅದು ನಿಜವೇ ಆಗಿರುತ್ತದೆ. ಇದಕ್ಕೇನನ್ನು ವಿರಿ ?

ಇನ್ನೊಂದು ಉದಾಹರಣೆಗೆ ಒಬ್ಬನು ಅತಿ ಬಡವನಾಗಿರುತ್ತಾನೆ. ಅತೀಂದ್ರಿ ಯ ಜ್ಞಾನವುಳ್ಳವ, ಅವನಿಗೆ ಕುರಿತು 'ನೀನು ನಾಲ್ಕಾರು ವರ್ಷಗಳಲ್ಲಿ ಲಕ್ಷಾಧಿಪತಿ ಯಾಗುತ್ತೀ!' ಎಂದು ಹೇಳುತ್ತಾನೆ. ಅವನು ಅದೇರೀತಿ ಆಗುತ್ತಾನೆ. ಇಂಥಾ ನಿದರ್ಶನಗಳು ಬೇಕಾದಷ್ಟಿವೆ ಇವೆಲ್ಲಾ ಅತೀಂದ್ರಿಯ ಪ್ರಜ್ಞಾ ವಿಶೇಷಗಳಲ್ಲವೇ ? ಹೀಗೆ ಅತೀಂದ್ರಿಯ ಶಕ್ತಿಯ ಸುದ್ದಿಗಳು ಕೇಳುವ ಸಾರ್ವಜನಿಕರಿಗೆ ಅಚ್ಚರಿಯೇ ಆಗುತ್ತವೆ. ಇದರ ಸಂಶೋಧನೆಗಳು ಮುಂದಿನ ವರ್ಷಗಳಲ್ಲಿ ಹೆಚ್ಚಾಗಿ ನಡೆದು ವಿಜ್ಞಾನದ ಅಸಾಮಾನ್ಯ ಪ್ರಯತ್ನಗಳಿಂದ 'ಕ್ಷ' ಕಿರಣ ಬೀರಿ, ಅತೀಂದ್ರಿಯದ ನಿಜ ತತ್ವ ಹೊರಗೆ ಬಾರದಿರುವುದಿಲ್ಲವೆಂಬುದನ್ನು ಊಹಿಸಬಹುದು. ಇದೊಂದು ಅಸಾ ಧಾರಣ ಶಕ್ತಿ ಎನಿಸುವುದರಿಂದ ಇದನ್ನು ಹೊಂದಿದವರನ್ನು "ಮಹಾಮಾನವ"ರೆಂದು ಏಕೆ ಕರೆಯಬಾರದು ?

ಇತ್ತೀಚಿನ ವಿಚಾರಪರರು 'ಯೋಗಶಕ್ತಿ' ಯ ಬಲದಿಂದ ಈ ಜ್ಞಾನವನ್ನು ಹೊಂದಬಹುದೆಂದು ಹೇಳಿರುತ್ತಾರೆ. ಇದು ಸತ್ಯವೋ ಅಲ್ಲವೋ ಎಂಬುದನ್ನು ಸಾಧನೆ ಮಾಡಿ ಸಿದ್ಧಿ ಪಡೆಯುವ ಪ್ರಯತ್ನ ಮಾತ್ರ ನಡೆಯಬೇಕು. ಇದಕ್ಕಾಗಿ ಜನರು ಟೊಂಕಕಟ್ಟಿ ಈ ಶಕ್ತಿಯನ್ನು ಪಡೆಯಲು ಪ್ರಯತ್ನಿಸುತ್ತಾರೆಯೇ ಎಂಬುದನ್ನು ಕಾದು ನೋಡಬೇಕಾಗಿದೆ. ಅಂತೂ ಅತೀಂದ್ರಿಯ ಶಕ್ತಿಯ ಪವಾಡ ಒಂದು ಆಶ್ಚರ್ಯಕರ ವಿಷಯವೇ ಆಗಿದೆ.







# ಗ್ರಾಮ ಸುಧಾರಣೆ ಯೋಜನೆಗಳಲ್ಲಿ ತರುಣ ರೈತರ ಪಾತ್ರ


— ಡಿ. ವೆಂಕಟರಾವ್, ಎಂ. ಎ. ಪ್ರಾಂಶುಪಾಲರು, ಹಾಸನ.


ಯಾವುದೇ ದೇಶದ ಆರ್ಥಿಕ ಅಭಿವೃದ್ಧಿಯಾಗಬೇಕಾದರೆ ಅಲ್ಲಿ ಲಭ್ಯವಿರುವ ನೈಸರ್ಗಿಕ ಸಂಪನ್ಮೂಲಗಳು ಮತ್ತು ಜನಶಕ್ತಿಯ ಪೂರ್ಣ ಉಪಯೋಗ ಆರ್ಥಿಕ ಕ್ಷೇತ್ರದಲ್ಲಿ ಶಾಸ್ತ್ರೋಕ್ತವಾಗಿ ಸಂಘಟಿತವಾಗಬೇಕಾಗುತ್ತದೆ. ದ್ವಿತೀಯ ಮಹಾಯುದ್ಧದಲ್ಲಿ ಪೂರ್ಣವಾಗಿ ಸೋಲನ್ನಪ್ಪಿ ನೆಲಸಮವಾದ ಜಪಾನ್, ಜರ್ಮನಿ ರಾಷ್ಟ್ರಗಳು ಕೇವಲ ಮುಂದಿನ 20 ವರ್ಷಗಳಲ್ಲೇ ಸತತ ಪ್ರಯತ್ನದ ಫಲವಾಗಿ ಚೇತರಿಸಿಕೊಂಡು ಇಂದು ಪ್ರಪಂಚದ ಮುಂದುವರಿದ ಅಮೇರಿಕ, ರಷ್ಯಾ ಮುಂತಾದ ದೇಶಗಳ ಜೊತೆಗೆ ಪುನಃ ಆರ್ಥಿಕ ಕ್ಷೇತ್ರದಲ್ಲಿ ಸ್ಪರ್ಧಿಸುತ್ತಿರುವುದು ಈ ಮಾತಿಗೆ ಉತ್ತಮ ನಿದರ್ಶನ. ಮುಖ್ಯವಾಗಿ ಜನತೆಯ ಸ್ವಾಭಿಮಾನ, ಕಷ್ಟ ಸಹಿಷ್ಣುತೆ, ಮತ್ತು ವೈಜ್ಞಾನಿಕ ಮನೋವೃತ್ತಿಯೇ ಆ ದೇಶಗಳ ಕ್ಷಿಪ್ರ ಪ್ರಗತಿಗೆ ಮೂಲಾಧಾರವಾಗಿವೆ. ಸ್ವಾತಂತ್ರ್ಯಾನಂತರ ನಮ್ಮ ದೇಶದಲ್ಲಿ ಪಂಚವಾರ್ಷಿಕ ಯೋಜನೆಗಳ ಮೂಲಕ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಗಾಗಿ ಸರಕಾರ ಸತತವಾಗಿ ಪ್ರಯತ್ನಿಸುತ್ತಿದೆ. ಆದಾಗ್ಯೂ ನಮ್ಮ ದೇಶ ಮುಂದುವರಿದ ದೇಶಗಳೊಂದಿಗೆ ಹೋಲಿಸಿದಾಗ ಅನೇಕ ವಿಷಯಗಳಲ್ಲಿ ಹಿಂದುಳಿದಿರುವುದು ಕಂಡುಬರುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಅಭಿವೃದ್ಧಿ ಯೋಜನೆಗಳಲ್ಲಿ ಜನರ ರಾಷ್ಟ್ರೀಯ ಮನೋಭಾವನೆಯಿಂದ ಮನಃಪೂರ್ವಕವಾಗಿ ಪಾಲ್ಗೊಳ್ಳದಿರುವುದು. ನಮ್ಮ ದೇಶ ಸ್ವಾವಲಂಬಿಯಾಗಿ ಬೆಳಗಬೇಕಾದರೆ ಪ್ರತಿಯೊಬ್ಬ ನಾಗರಿಕನೂ ಜಾಗೃತನಾಗಿ, ದೇಶದ ಸ್ಥಿತಿ–ಗತಿಗಳನ್ನರಿತು ಅಭಿವೃದ್ಧಿ ಕ್ಷೇತ್ರದಲ್ಲಿ ಮುಕ್ತ ಮನಸ್ಸಿನಿಂದ ಪಾತ್ರವಹಿಸಬೇಕು.

ಕೃಷಿ ಪ್ರಧಾನವಾದ ಭಾರತ ದೇಶದಲ್ಲಿ ಶೇ. 70 ರಷ್ಟು ಜನ ಕೃಷಿಯಲ್ಲಿ ನಿರತರಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ದೇಶದ ಉತ್ಪಾದನೆ ಮತ್ತು ಆದಾಯದಲ್ಲಿ ಅರ್ಧ ಭಾಗದಷ್ಟು ಕೃಷಿಯಿಂದ ದೊರೆಯುತ್ತದೆ. ಇಷ್ಟೊಂದು ಅಧಿಕ ಪ್ರಮಾಣದಲ್ಲಿ ಉದ್ಯೋಗ ಮತ್ತು ಆದಾಯಗಳನ್ನು ಒದಗಿಸುತ್ತಿರುವ ಕೃಷಿ ಮಾತ್ರ ನಮ್ಮ ದೇಶದಲ್ಲಿ ಇನ್ನೂ ಬಹುಭಾಗ ಹಿಂದಿನ ಪದ್ಧತಿಯಂತೆಯೇ ನಡೆದು ಬರುತ್ತಿದೆ. ಇತರ ಔದ್ಯೋಗಿಕ, ವಾಣಿಜ್ಯ ಕ್ಷೇತ್ರಗಳಲ್ಲಿ ಆಗಿರುವ ಸುಧಾರಣೆಗೆ ಹೋಲಿಸಿದರೆ ಕೃಷಿ ಕ್ಷೇತ್ರದಲ್ಲಿ ಆಗಿರುವ ಸುಧಾರಣೆ ಬಹಳ ಕಡಿಮೆ. ಇದಕ್ಕೆ ಮುಖ್ಯ ಕಾರಣ

ವೆಂದರೆ ನಮ್ಮ ರೈತರು ವೈಜ್ಞಾನಿಕ ಸುಧಾರಣೆಗಳನ್ನು ಅರಿತು ಅನುಷ್ಠಾನಕ್ಕೆ ತರು
ವಷ್ಟು ವಿದ್ಯಾವಂತರಲ್ಲ, ಹಾಗೂ ಅವರ ಹಳ್ಳಿಯ ವಾಸ ಮತ್ತು ಬಡತನದ ಸ್ಥಿತಿಗಳು
ಮುಂದುವರಿದ ನಾಗರೀಕ ಜನತೆಯೊಂದಿಗೆ ಬೆರೆತು ಪ್ರಗತಿಪರ ವಿಚಾರಗಳನ್ನು
ತಿಳಿದುಕೊಳ್ಳಲು ಅವಕಾಶ ಕೊಡುವುದಿಲ್ಲ. ವ್ಯವಸಾಯಗಾರರ ಸ್ಥಿತಿ ಬದಲಾಗಬೇಕಾ
ದರೆ ಗ್ರಾಮಾಂತರ ಪ್ರದೇಶದಲ್ಲಿರುವ ವಿದ್ಯಾವಂತ ತರುಣ ರೈತರು ಜಾಗೃತರಾಗಿ,
ವ್ಯವಸಾಯಾಭಿವೃದ್ಧಿ ಹಾಗೂ ಗ್ರಾಮ ಸುಧಾರಣೆ ಯೋಜನಗಳಲ್ಲಿ ಸ್ವಯಂಸ್ಫೂರ್ತಿ
ಯಿಂದ ಸಂಘಟಿತರಾಗಿ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ರೂಢಿಯಲ್ಲಿ
ತರುವಂತೆ ಕಾರ್ಯ ಪ್ರವೃತ್ತರಾಗಬೇಕು. ಇಂದಿನ ತರುಣರೇ ಮುಂದಿನ ಪ್ರಬುದ್ಧ
ರೈತರಾಗುವುದರಿಂದ ಈ ಕಾರ್ಯವನ್ನು ಅವರು ಶ್ರದ್ಧೆಯಿಂದ ಮಾಡಿದಷ್ಟೂ ತೀವ್ರ
ಅಭಿವೃದ್ಧಿ ಆಗುತ್ತದೆ.

## ಕೃಷಿ ಕ್ಷೇತ್ರದಲ್ಲಿ ಬದಲಾವಣೆ

ಹಿಂದಿನ ಹಾಗು ಇಂದಿನ ಕೃಷಿಯಲ್ಲಿ ಭಾರಿ ಸ್ಥಿತ್ಯಂತರಗಳು ನಡೆದಿವೆ. ಈ
ಮಧ್ಯಂತರದಲ್ಲಿ ಮಣ್ಣಿನ ಬಗೆಗಿನ ಜ್ಞಾನ ಅಧಿಕಗೊಂಡಿದೆ, ಸಸ್ಯಪೋಷಣೆಯ ಮೇಲೆ
ಹೊಸ ಬೆಳಕು ಚೆಲ್ಲಲಾಗಿದೆ. ಅದ್ಭುತ ಶಕ್ತಿಯ ಬೀಜಗಳು ವೈದಾಳಿವೆ. ಸಸ್ಯಾ
ಹಾರ ವೈವಿಧ್ಯತೆಯ ವಿವರಗಳನ್ನು ಸಂಗ್ರಹಿಸಲಾಗಿದೆ. ಉತ್ತುವ–ಬಿತ್ತುವ ಪರಿಣಾಮ
ಕಾರಿ ಕ್ರಮ ಕಂಡುಹಿಡಿಯಲಾಗಿದೆ, ಬೆಳೆ ರಕ್ಷಣೆಯ ಅರಿವನ್ನು ಜನರಲ್ಲಿ ಮೂಡಿಸ
ಲಾಗಿದೆ. ನೀರಾವರಿ ಬೇಸಾಯ ವಿಸ್ತರಣೆ, ರಾಸಾಯನಿಕ ಗೊಬ್ಬರಗಳು, ಕ್ರಿಮಿ
ಕೀಟನಾಶಕಗಳು, ನೂತನ ಯಂತ್ರೋಪಕರಣಗಳು ಕೃಷಿ ಕ್ಷೇತ್ರವನ್ನು ಪ್ರವೇಶಿಸಿವೆ.
ಇವುಗಳ ಅನುಷ್ಠಾನ ಕೃಷಿ ಅಭಿವೃದ್ಧಿಯಲ್ಲಿ ಒಂದು ಮೈಲಿಗಲ್ಲು. ಇದರ ಫಲವಾಗಿ
ಜೀವನಾಧಾರ ಕೃಷಿ ವಾಣಿಜ್ಯ ಕೃಷಿಯಾಗಿ ಪರಿವರ್ತನೆ ಗೊಂಡಿದೆ. ಈ ಆಸ್ಫೋ
ಟನೆಯೇ ಹಸಿರುಕ್ರಾಂತಿ. ಆದರೆ ತೇಜವಾದ ಹಸಿರು ಕ್ರಾಂತಿಯಾಗಬೇಕಾದರೆ
ನಮ್ಮ ಭೂಮಿಯ ಎಕರೆವಾರು ಉತ್ಪಾದನೆಯು ಮುಂದುವರಿದ ದೇಶಗಳ ಸರಿಸಮ
ಪ್ರಮಾಣದಷ್ಟು ಹೆಚ್ಚುವರಿಯಾಗಬೇಕು. ಇದಲ್ಲದೆ ನಮ್ಮ ರೈತರು ಈ ಎಲ್ಲಾ ಸುಧಾ
ರಣೆಯ ಕ್ರಮಗಳನ್ನು ಅರಿತುಕೊಂಡು ತಮ್ಮ ನಿತ್ಯ ವ್ಯವಸಾಯದಲ್ಲಿ ಪರ ಸಹಾಯ
ವಿಲ್ಲದೆ ಸ್ವಂತಜ್ಞಾನದಿಂದ ಅನುಷ್ಠಾನದಲ್ಲಿ ತರುವಷ್ಟು ತಿಳುವಳಿಕೆಯುಳ್ಳವರಾಗಬೇಕು.
ಏಕೆಂದರ ರೈತರು ನಿತ್ಯ ವ್ಯವಸಾಯವನ್ನು ಸುಧಾರಿಸಿದ ಪದ್ಧತಿಯಿಂದ ಮಾಡಲು
ಸ್ವತಃ ಸಮರ್ಥರಾದಾಗ ಮಾತ್ರ ದೇಶದಲ್ಲಿ ವ್ಯವಸಾಯಾಭಿವೃದ್ಧಿ ಸ್ಥಿರವಾಗಿ ಉಳಿ
ಯಲು ಸಾಧ್ಯ. ಈ ದೃಷ್ಟಿಯಿಂದ ನಮ್ಮ ತರುಣ ರೈತರು ನೂತನ ಸುಧಾರಣಾ ಕ್ರಮ
ಗಳಲ್ಲಿ ತರಬೇತಿ ಪಡೆದು, ತಮ್ಮ ಗ್ರಾಮದಲ್ಲಿನ ವ್ಯವಸಾಯ ಸುಧಾರಣೆಯಲ್ಲಿ ಹಿರಿಯ
ರೈತರಿಗೆ ಸಹಾಯ ಮಾಡುವುದು ಅಗತ್ಯ. ಈ ದಿಸೆಯಲ್ಲಿ ತರುಣ ರೈತರು ತಾವೇ



ಸಂಘಟಿತರಾಗಿ ಅವಶ್ಯವಾದ ವಿಚಾರಗಳಲ್ಲಿ ವೈಜ್ಞಾನಿಕ ಮತ್ತು ತಾಂತ್ರಿಕ ತರಬೇತಿ
ಮುಂದಾಗಬೇಕು. ಕೇವಲ ಕೃಷಿ ಅಭಿವೃದ್ಧಿಯಲ್ಲದೆ ನಾಗರೀಕ ಜೀವನದ ಗೊತ್ತು
ಗುರಿಗಳ ವಿಚಾರಗಳು, ಆರೋಗ್ಯಕರವಾದ ವಾಸಸ್ಥಳ, ಪೌಷ್ಠಿಕ ಆಹಾರ, ಗ್ರಾಮ
ದಲ್ಲಿ ಕೈಗೊಳ್ಳಬಹುದಾದ ಹೈನುಗಾರಿಕೆ, ಕೋಳಿ ಸಾಕಾಣಿಕೆ, ಗೃಹಕೈಗಾರಿಕೆ, ರೇಷ್ಮೆ
ಹುಳು ಸಾಕುವಿಕೆ, ಮೊದಲಾದ ಉಪ ಕಸುಬುಗಳ ವಿಚಾರದಲ್ಲೂ ಸಾಕಷ್ಟು ಪರಿ
ಜ್ಞಾನವನ್ನು ಅವರು ಪಡೆಯುವುದು ಆವಶ್ಯಕ.

## ತರಬೇತಿ ಸೌಲಭ್ಯಗಳು :

ಈಗಾಗಲೇ ಕೇಂದ್ರ ಮತ್ತು ರಾಜ್ಯ ಸರಕಾರಗಳು ತರುಣ ರೈತರ ಹಾಗೂ
ಸಾಮಾನ್ಯ ರೈತರ ತರಬೇತಿಗಾಗಿ ಅನೇಕ ಕಾರ್ಯಕ್ರಮಗಳ ಮೂಲಕ ವ್ಯವಸ್ಥೆ
ಮಾಡಿವೆ. ಹಾಗೂ ಹೆಚ್ಚಿನ ತರಬೇತಿ ಕಾರ್ಯಕ್ರಮಗಳನ್ನು ಸೂಚಿಸು
ತ್ತಿವೆ. ಕೃಷಿ ಇಲಾಖೆಗಳು ಈಗಾಗಲೇ ಗ್ರಾಮಾಂತರ ತರಬೇತಿ ಕೇಂದ್ರಗಳ ಮೂಲಕ
ರೈತರಿಗೆ ತರುಣ ರೈತರಿಗೆ ಸುಧಾರಿತ ಬೇಸಾಯ ಕ್ರಮಗಳಲ್ಲಿ ತರಬೇತಿ ಮಾಡುತ್ತಿವೆ.
ಅದರಂತೆ ಕೃಷಿ ವಿಶ್ವವಿದ್ಯಾಲಯದವರು ರೈತ ತರಬೇತಿ ಕೇಂದ್ರದ ಮೂಲಕ ತರಬೇತಿ
ವ್ಯವಸ್ಥೆ ಮಾಡಿದ್ದಾರೆ. ಆಯಾ ಪ್ರದೇಶದ ಮುಖ್ಯ ಬೆಳೆಗಳ ಮತ್ತು ತರುಣ ರೈತರಿಗೆ
ಆಸಕ್ತಿ ಇರುವ ಬೆಳೆಗಳ ಕೃಷಿ ವಿಧಾನವನ್ನು ವೈಜ್ಞಾನಿಕ ರೀತಿಯಲ್ಲಿ ಬೋಧಿಸುವುದು
ಹಾಗೂ ಅವರಲ್ಲಿ ಕೃಷಿ ವಿಧಾನಗಳನ್ನು ಕುರಿತ ಜ್ಞಾನ ಮತ್ತು ಮೂಢ ನಂಬಿಕೆ
ಗಳನ್ನು ಹೋಗಲಾಡಿಸುವುದು ಇದರ ಉದ್ದೇಶ. ಕರ್ನಾಟಕ ರಾಜ್ಯದಲ್ಲಿ ಇಂತಹ
ಹನ್ನೊಂದು ತರಬೇತಿ ಕೇಂದ್ರಗಳು ಕೆಲಸ ಮಾಡುತ್ತಿವೆ. ಇವುಗಳಲ್ಲಿ ಒಂದು ಬೆಂಗ
ಳೂರಿನ ಕೃಷಿ ವಿಶ್ವವಿದ್ಯಾಲಯಕ್ಕೆ ಸೇರಿದ್ದು. ಉಳಿದವು ಬೇರೆ ಜಿಲ್ಲೆಗಳಲ್ಲಿದ್ದು ಕೃಷಿ
ಇಲಾಖೆಗೆ ಸೇರಿವೆ. ಬೆಂಗಳೂರಿನ ಸಂಸ್ಥೆಯು ಡೆನ್ಮಾರ್ಕ್ ನೆರವಿನಿಂದ ನಡೆಯು
ತ್ತಿದೆ. ಈ ತರಬೇತಿ ಶಿಬಿರಕ್ಕೆ ವಿವಿಧ ತಾಲ್ಲೂಕುಗಳಿಂದ ತರುಣ ರೈತರನ್ನು ಆಯಾ
ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಆಯ್ಕೆ ಮಾಡಿ ಕಳಿಸುತ್ತಾರೆ. ತರಬೇತಿ ನೀಡು
ವಷ್ಟು ದಿನವೂ ಊಟ, ವಸತಿ ಎಲ್ಲವನ್ನೂ ಸಂಸ್ಥೆಯೇ ಭರಿಸುತ್ತದೆ. ಕೃಷಿವಿಶ್ವ
ವಿದ್ಯಾಲಯದ ತಜ್ಞರು ಬಂದು ಶಿಬಿರಾರ್ಥಿಗಳಿಗೆ ಅಮೂಲ್ಯ ಸಲಹೆಗಳನ್ನು ನೀಡಿ
ವಿಶ್ವವಿದ್ಯಾಲಯದ ಪ್ರಯೋಗ ಶಾಲೆಗಳಿಗೆ ಕರೆದೊಯ್ದು ವಿವರಣೆ ನೀಡುತ್ತಾರೆ.
ಶಿಬಿರ ಮುಗಿದ ಮೇಲೆ ತಮ್ಮ ಸ್ವಂತ ಜಮೀನಿನಲ್ಲಿ ಹೊಸ ವಿಧಾನವನ್ನು ಪರೀಕ್ಷಿಸು
ವಾಗ ಏನಾದರೂ ಸಲಹೆಗಳು ಬಂದಲ್ಲಿ ತರುಣ ರೈತರು ಪತ್ರ ಬರೆದು ಉತ್ತರ ಪಡೆಯ
ಬಹುದು. ತರಬೇತಿ ಪಡೆದವರು ತಮ್ಮ ಹಳ್ಳಿಗಳಲ್ಲಿ ಚರ್ಚಾ ಮಂಡಲಿಗಳನ್ನು ಕಟ್ಟಿ
ಕೊಂಡು ಹೊಸ ಕೃಷಿ ವಿಧಾನಗಳ ಮಾಹಿತಿಯನ್ನು ಇತರರೊಂದಿಗೆ ಹಂಚಿಕೊಳ್ಳು
ವಂತೆಯೂ ಉತ್ತೇಜನ ನೀಡಲಾಗುತ್ತದೆ.

* * *





ಇದರಂತೆಯೇ ಪಶು ಸಂಗೋಪನಾ ಇಲಾಖೆಯವರು ಹೈನದ ಉದ್ಯಮ, ಕೋಳಿ ಸಾಕಾಣಿಕೆ ಮುಂತಾದ ವಿಷಯಗಳಲ್ಲಿ ಸೂಕ್ತನಾವ ಪ್ರತ್ಯೇಕ ತರಬೇತಿ ಕಾರ್ಯಕ್ರಮ ಏರ್ಪಡಿಸಿದ್ದಾರೆ. ರೈತರ ತರಬೇತಿಯ ಮಹತ್ವವನ್ನರಿತು ಕೃಷಿ ಇಲಾಖೆಯವರು ಪ್ರತ್ಯೇಕ ವಿಭಾಗವೊಂದನ್ನು ರಚಿಸಿ, ಜಾಯಿಂಟ್ ಡೈರೆಕ್ಟರ್ ದರ್ಜೆಯ ಒಬ್ಬ ಅಧಿ ಕಾರಿಯನ್ನು ನೇಮಿಸಿರುತ್ತಾರೆ. ಇದರಿಂದ ತರುಣ ರೈತರ ತರಬೇತಿಗೆ ವಿಶೇಷ ಗಮನ ಕೊಡಲು ತುಂಬಾ ಸಹಕಾರಿಯಾಗಿದೆ. ತರುಣ ರೈತರಿಗೆ ಮತ್ತು ಸಾಮಾನ್ಯ ರೈತ ರಿಗೆ ನೀಡುತ್ತಿರುವ ತರಬೇತಿ ವಿಷಯಗಳೆಂದರೆ, ಸುಧಾರಿತ ವ್ಯವಸಾಯ ಕ್ರಮಗಳು, ನೀರಾವರಿ ಬೇಸಾಯ, ಜಿನುಗು ಭೂಮಿ ಸುಧಾರಣೆ, ಹೆಚ್ಚು ಇಳುವರಿ ಸಂರಕ್ಷಣಾ ಬೀಜ ಉತ್ಪಾದನೆ, ಸಸ್ಯ ಸಂರಕ್ಷಣೆ, ಹೈನು ವ್ಯವಸಾಯ, ಕೋಳಿ ಸಾಕಾಣಿಕೆ, ಯಾಂತ್ರಿಕ ವ್ಯವಸಾಯ, ಕೃಷಿ ಹುಟ್ಟುವಳಿ, ಸಂಗ್ರಹಣೆ ಹಾಗೂ ಮಾರಾಟ, ಕೃಷಿ ಹುಟ್ಟುವಳಿ ಪರಿವರ್ತನೆ, ವ್ಯವಸಾಯ ಲೆಕ್ಕಪತ್ರಗಳು, ಆರ್ಥಿಕ ಸಹಾಯ ಸಹಕಾರ ಇತ್ಯಾದಿಗಳು. ಈ ವಿಷಯದ ಜೊತೆಗೆ ಗ್ರಾಮ ನೈರ್ಮಲ್ಯ, ಸಮಾಜ ಜೀವನ, ಪ್ರಜಾಪ್ರಭುತ್ವ ತತ್ತ್ವ ಹಾಗೂ ಆಡಳಿತ ಮೊದಲಾದ ಸೂಕ್ತ ವಿಷಯಗಳನ್ನು ಸಹ ಸರ್ವೇ ಸಾಮಾನ್ಯವಾಗಿ ಅವರಿಗೆ ತಿಳಿಸಿಕೊಡಬಹುದಾಗಿದೆ.

ಆದರೆ ಈ ಎಲ್ಲಾ ಕಾರ್ಯಕ್ರಮಗಳ ಯಥಾರ್ಥ ಗುರಿ ಈಡೇರಬೇಕಾದರೆ ಮತ್ತು ಪ್ರತ್ಯಕ್ಷ ಕಾರ್ಯಕ್ಷೇತ್ರದಲ್ಲಿ ಫಲಕಾರಿಯಾಗಬೇಕಾದರೆ ತರುಣ ರೈತರ ಸಂಘ ಟನೆಯ ಮೂಲಕ ಮಾತ್ರ ಸಾಧ್ಯ. ತರಬೇತಿ ಪಡೆದ ತರುಣರು ಸ್ವಯಂ ಪ್ರೇರಣೆ ಯಿಂದ ರಕ್ಷಣಾರ್ಥಿಗಳಾಗಿ ತಮ್ಮ ಶಿಕ್ಷಣದ ಜ್ಞಾನವನ್ನು ತಮಗೂ, ತಮ್ಮ ನೆರೆಹೊರೆ ರೈತರಿಗೂ ಮುಕ್ತ ಮನಸ್ಸಿನಿಂದ ಸೇವಾಕಾಂಕ್ಷಿಗಳಾಗಿ ಒದಗಿಸಿಕೊಡುವ ಸಂಕಲ್ಪದವ ರಾಗಿರಬೇಕಾಗುತ್ತದೆ. ಈ ಸಂಕಲ್ಪದ ತರುಣರನ್ನು ಕಂಡುಹಿಡಿದು ಆಯ್ಕೆ ಮಾಡು ವುದು ಸ್ವಯಂಪ್ರೇರಿತ ಸಂಘಗಳಿಂದ ಮಾತ್ರ ಸುಲಭ ಸಾಧ್ಯ. ಏಕೆಂದರೆ ಸಾರ್ವ ಜನಿಕವಾಗಿ ಸೇವೆ ಮಾಡುವ ಸಂಸ್ಥೆಗಳು ತಮ್ಮ ಸಂಸ್ಥೆಗಳ ಮೂಲಕ ನೈತಿಕವಾಗಿ ಹೊಣೆಯಾಗಿರಬೇಕಾಗುತ್ತದೆ. ಅದರಂತೆ ಸರಕಾರ ಸಹ ಇಂತಹ ಸ್ವಯಂಪ್ರೇರಿತ ಸಂಘಗಳನ್ನು ಗುರುತಿಸಿ, ಮನ್ನಣೆ ಕೊಟ್ಟು ಪ್ರೋತ್ಸಾಹಿಸಬೇಕಾಗುತ್ತದೆ. ಈ ಎಲ್ಲ ಹಿನ್ನೆಲೆಯಲ್ಲಿ, ಅಖಿಲ ಭಾರತ ತರುಣ-ರೈತ ಸಮಾಜ ಸ್ಥಾಪನೆಯಾಗಿದ್ದು ಅದರ ರಾಜ್ಯ ಘಟಕಗಳು ಈಗಾಗಲೇ ಕಾರ್ಯಪ್ರವೃತ್ತವಾಗಿವೆ. ಇವುಗಳ ಮೂಲಕ ಗ್ರಾಮಾಂತರದ ತರುಣ ರೈತರು ಜಾಗೃತರಾಗಿ ಗ್ರಾಮ ತರುಣ ರೈತ ಸಮಾಜವನ್ನು ಸ್ಥಾಪಿಸಿಕೊಂಡು, ತಮ್ಮ ಪಾತ್ರವನ್ನು ಪ್ರಭಾವಿಯಾಗಿ ತೋರಿಸಿಕೊಡಬೇಕು.

**ಸಾಮೂಹಿಕ ಸೇವಾ ಕಾರ್ಯಗಳು :**

ಸ್ವಯಂ ಪ್ರೇರಿತ ಖಾಸಗಿ ಸಂಸ್ಥೆಗಳು ಸಮಾಜದಿಂದ ಹಾಗೂ ಸರಕಾರದಿಂದ

ಮನ್ನಣೆ ಪಡೆಯಬೇಕಾಗಿದ್ದಲ್ಲಿ ತಮ್ಮ ಸಂಸ್ಥೆಯ ಉದ್ದೇಶಗಳನ್ನನುಸರಿಸಿ ಶಿಸ್ತಿನಿಂದ ಶ್ರಮವಹಿಸಿ ಯತಾರ್ಥನಾಗಿ ಕಾರ್ಯಮಾಡಿ ತೋರಿಸಬೇಕಾಗುತ್ತದೆ. ಹಾಗೆಯೇ ಸಮಾಜದಲ್ಲಿ ಅವಶ್ಯವಿರುವ ಸೇವೆಯನ್ನೂ, ನೆರವನ್ನೂ ತಾವೇ ಮುಂದಾಗಿ ಬಂದು ಸ್ವಯಂಪ್ರೇರಣೆಯಿಂದ ನಿರ್ವಹಿಸಬೇಕಾಗುತ್ತದೆ. ಅಭಿವೃದ್ಧಿ ಕಾರ್ಯಗಳಲ್ಲಿ ಇಂತಹ ಸಂಸ್ಥೆಗಳು ಕೊಡುವ ನೆರವು ಮತ್ತು ಕಾಲಕಾಲಕ್ಕೆ ಗ್ರಾಮ ಸಮಾಜದ ಅವಶ್ಯಕತೆಯನ್ನು ಅನುಸರಿಸಿ ಕೊಡ ಮಾಡುವ ಸೇವೆ ಬಹಳ ಅಮೂಲ್ಯವಾದದ್ದು. ಈ ದಿಸೆಯಲ್ಲಿ ನಮ್ಮ ತರುಣ ರೈತರು ಸ್ವಯಂ ಪ್ರೇರಣೆಯಿಂದ ಸ್ವಯಂಸೇವಕರಾಗಿ ನಾಡಿನ ಅಭಿವೃದ್ಧಿಗಾಗಿ, ಸಮಾಜದ ಶ್ರೇಯಸ್ಸಿಗಾಗಿ ಸ್ಥಳೀಯ ಪರಿಸ್ಥಿತಿಗನುಗುಣವಾಗಿ ಹಲವಾರು ಸಾಮೂಹಿಕ ಕಾರ್ಯ ಕ್ರಮಗಳನ್ನು ಕೈಗೊಳ್ಳಬಹುದಾಗಿದೆ. ಅವು ಯಾವುವೆಂದರೆ, ಸಾಮೂಹಿಕ ಗಿಡ ನೆಡುವ ಕಾರ್ಯಕ್ರಮ, ಸಸ್ಯ ಸಂರಕ್ಷಣೆ, ಸ್ವಯಂಸೇವಕ ತಂಡಗಳನ್ನು ಸಂಘಟಿಸುವ ಮೂಲಕ ರೈತರಿಗೆ ನಾಟಿಹಾಕುವ, ಒಕ್ಕುವ ಮೊದಲಾದ ಹಲವಾರು ಕೃಷಿ ಕಾರ್ಯಗಳಲ್ಲಿ ನೆರವಾಗುವುದು. ರೈತರ ಬೆಳೆಗಳನ್ನು ಸ್ವಯಂಸೇವಕ ತಂಡಗಳ ಮೂಲಕ ಕಾಯಲು ನೆರವಾಗಿ ಕಳ್ಳಕಾಕರಿಂದ, ಪಶು–ಪಕ್ಷಿಗಳಿಂದಾಗುವ ನಷ್ಟವನ್ನು ತಡೆಗಟ್ಟುವುದು, ದನಗಳ ಕೊಟ್ಟಿಗೆ ಮತ್ತು ತಿಪ್ಪೆ ಗುಂಡಿಗಳ ಸುಧಾರಣೆ, ಸಾಮೂಹಿಕ ಕಾಂಪೋಸ್ಟ್ ಮಾಡುವುದು ಇತ್ಯಾದಿ ಕಾರ್ಯಕ್ರಮಗಳಿಂದ ಗ್ರಾಮ ನೈರ್ಮಲ್ಯವನ್ನು ಸುಧಾರಿಸುವುದು, ಸಮಪಾತಳಿ ಒಡ್ಡು ಹಾಕುವ ಕಾಲದಲ್ಲಿ ಸೂಕ್ತ ನೆರವು ನೀಡುವುದು, ದನ, ಕುರಿ, ಕೋಳಿ, ಮುಂತಾದ ಪ್ರಾಣಿಗಳ ಪೀಳಿಗೆ ಅಭಿವೃದ್ಧಿಯ ಬಗ್ಗೆ ರೈತರಿಗೆ ತಿಳುವಳಿಕೆಯಿತ್ತು, ಸಂಬಂಧಿಸಿದ ಅಧಿಕಾರಿಗಳ ನೆರವಿನಿಂದ ಪ್ರಾಣಿಸಂಪತ್ತು ಸಮೃದ್ಧಿಯಾಗುವಂತೆ ಮಾಡುವುದು, ಗ್ರಾಮದಲ್ಲಿ ಹೈನದ ಉದ್ಯಮ ಕೋಳಿ ಸಾಕಾಣಿಕೆ ಅಭಿವೃದ್ಧಿ ಹೊಂದಲು ಪ್ರೋತ್ಸಾಹ ಕೊಡುವುದು, ಉತ್ಪಾದನೆಯಾಗುವ ವಸ್ತುಗಳನ್ನು ಸಂಗ್ರಹಿಸಿ ಯೋಗ್ಯ ಬೆಲೆಗೆ ಮಾರಾಟವಾಗುವುದಕ್ಕೆ ನೆರವಾಗುವುದು, ಗ್ರಾಮದಲ್ಲಿ ಜರುಗುವ ಎಲ್ಲಾ ಸಾಮಾಜಿಕ ಚಟುವಟಿಕೆಗಳಲ್ಲಿ ಅಂದರೆ ಜಾತ್ರೆ ರೋಗ–ರುಜಿನಗಳ ಪ್ರತಿಬಂಧಕ ಕಾರ್ಯ, ಮಿತ ಸಂತಾನ ಯೋಜನೆ, ಮುಂತಾದುವುಗಳಲ್ಲಿ ಸ್ವಯಂ ಸೇವಕರಾಗಿ ಕಾರ್ಯನಿರ್ವಹಿಸುವುದು ಇತ್ಯಾದಿ.

ಭಾರತದಲ್ಲಿ ಕಳೆದೊಂದು ದಶಕದಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ಗ್ರಾಮ ಪುನರ್ನಿರ್ಮಾಣ ಯೋಜನೆಗಳು ವಿಶೇಷ ಪ್ರಾಮುಖ್ಯ ಪಡೆದುಕೊಂಡಿವೆ. ಗ್ರಾಮೀಣ ಪ್ರದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳ ಪ್ರವೇಶದ ಜೊತೆಗೇ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ, ಗ್ರಾಮೀಣ ನಿರುದ್ಯೋಗಿ ಯುವಕರ ತರಬೇತಿ ಮತ್ತು ಉದ್ಯೋಗ ಯೋಜನೆಗಳು, ಕೃಷಿ ಮತ್ತು ನೀರು ಮತ್ತು ವಿದ್ಯುತ್ ಪೂರೈಕೆ ಯೋಜನೆಗಳು, ಡಿ. ಆರ್. ಪಿ. ಸಾಲಗಳು, ಅದಕ್ಕೆ ಸಂಬಂಧಿಸಿದ ಚಟುವಟಿಕೆಗಳಿಗೆ ವಿಶೇಷ ಧನ ಸಹಾಯ ಮತ್ತು ಪ್ರೋತ್ಸಾಹ,

ಹಿಂದುಳಿದ ವರ್ಗಗಳ ಚೈತನ್ಯ ಯೋಜನೆ, ಅಂತ್ಯೋದಯ, ವಿಶೇಷಘಟಕ ಯೋಜನೆ ಮುಂತಾದ ಹಲವು ಹತ್ತು ಕಾರ್ಯಕ್ರಮಗಳು ಇಂದು ಜಾರಿಗೆ ಬಂದಿವೆ. ಗ್ರಾಮಾಭಿವೃದ್ಧಿ ಕಾರ್ಯಕ್ರಮಗಳನ್ನು ಕೇಂದ್ರ ಸರಕಾರ, ರಾಜ್ಯ ಸರಕಾರಗಳು ಅವಿಚ್ಛಿನ್ನವಾಗಿ ನಡೆಸುತ್ತಿವೆ ಗೃಹ ಕೈಗಾರಿಕೆ, ಕುರಿ ಸಾಕಣೆ, ಕೋಳಿ ಸಾಕಣೆ ಇತ್ಯಾದಿಗಳಿಗೆ ಹಣದ ಹೊಳೆ ಹರಿಯುತ್ತಿದೆ. ಆದರೆ ಈ ಎಲ್ಲಾ ಸರಕಾರಿ ಅಭಿವೃದ್ಧಿ ಯತ್ನಗಳಿಗೆ ನಿರ್ಣಯಾತ್ಮಕ ಗೆಲುವು ಲಭಿಸಬೇಕಾದರೆ ಹಳ್ಳಿಗಳ ಸಮಸ್ಯೆಗಳನ್ನು ಅರ್ಥೈಸಿ ಕಡಿಮೆ ಮಾಡಬಲ್ಲ ಸತ್ವಶಾಲಿ ತರುಣ ರೈತರ ಸಕ್ರಿಯ ಪಾತ್ರ ತೀರಾ ಅಗತ್ಯ.





# ಟೈಟಾನಿಯಂ

— ಪ. ರಾಮಕೃಷ್ಣ ಶಾಸ್ತ್ರಿ
ಶಿವಶಕ್ತಿ ನಿಲಯ, ಪೋ : ಮಚ್ಚಿನ–574295 [ವಯಾ]ಮಡಂತ್ಯಾರ್, ದ. ಕ.

ಲೋಹಗಳಲ್ಲೆಲ್ಲ ಪ್ರಚಂಡವೆನಿಸಿಕೊಂಡಿರುವ ಟೈಟಾನಿಯಂ ಬಹು ಕಾಲದವರೆಗೂ ನಿರುಪಯೋಗಿ ವಸ್ತುವೆಂದೇ ಪರಿಗಣಿಸಲ್ಪಟ್ಟಿತ್ತು. ಅನಾದಿಯಿಂದಲೂ ಅಪ್ರಯೋಜಕವೆಂಬ ಕೆಂಪು ಪಟ್ಟಿಯನ್ನು ಹೊತ್ತಿದ್ದ ಅದನ್ನು ೧೭೯೧ ರಲ್ಲಿ ಇಂಗ್ಲೆಂಡಿನಲ್ಲಿ ಪ್ರಖ್ಯಾತ ಲೋಹ ಪರಿಣತ ವಿಲಿಯಂ ಗ್ರೇಗೆಲ್‌ರವರು ಬೆಳಕಿಗೆ ತಂದರು. ಆಗ ಒಂದು ಭಾಗ ಟೈಟಾನಿಯಂ ಎರಡಂತ ಪ್ರಾಣವಾಯುವಿನೊಂದಿಗೆ ಸಂಯೋಗ ಹೊಂದಿ ಡೈ ಆಕ್ಸೈಡ್ ಸಂಯುಕ್ತ ರೂಪದಲ್ಲಿತ್ತು. ಕಾರ್ನೆವಾಲ್‌ನಲ್ಲಿರುವ ಮೆನಾಕನ್ ಎಂಬ ಪ್ರದೇಶದಲ್ಲಿ ಲಭಿಸುತ್ತಿದ್ದ ಒಂದು ಬಗೆಯ ವಿಶಿಷ್ಟ ಕಪ್ಪು ಉಸುಕಿನಂತಿದ್ದ ಅದಿರಿನಲ್ಲಿ ಇದನ್ನು ಗುರುತಿಸಲಾಯಿತು. ಆದ ಕಾರಣ ಈ ಲೋಹಕ್ಕೆ ವಿಲಿಯಂ ಗ್ರೇಗರ್ ಇಟ್ಟ ಮೊದಲ ಹೆಸರು "ಮೆನಾಕೈಟ್"

೧೭೯೫ ರಲ್ಲಿ ಜರ್ಮನಿಯ ಎಂ. ಎಚ್. ಕ್ಲೆಪ್ರಾಥ್ ಎಂಬ ವಿಜ್ಞಾನಿ ರೂಟೈಲ್ ಅದಿರಿನಲ್ಲಿ ಒಂದು ಧಾತುವನ್ನು ಕಂಡುಹಿಡಿದರು. ಗ್ರೀಕ್ ಪುರಾಣಗಳಲ್ಲಿ ಬರುವ ಟೈಟಾನ್‌ಗಳೆಂಬ ಅತಿಮಾನವ ಶಕ್ತಿಗಳ ಹೆಸರನ್ನಾಧರಿಸಿ, ಆ ಧಾತುವಿಗೆ ಟೈಟಾನಿಯಂ ಎಂದು ಆತ ಹೆಸರಿಸಿದರು. ಕೆಲವು ಸಮಯದ ಬಳಿಕ ಈ ಧಾತು ಮತ್ತು ಮೆನಾಕೈಟ್ ಲೋಹ ಎರಡೂ ಒಂದೇ ಎಂಬುದು ಸಿದ್ಧವಾಯಿತು. ಹೀಗಾಗಿ ಆವೆರಡಕ್ಕೂ ಟೈಟಾನಿಯಂ ಎಂಬ ಹೆಸರೇ ಬಂತು.

ಹೀಗಿದ್ದರೂ ಹೊಸ ಲೋಹವೊಂದು ಸಂಶೋಧಿಸಲ್ಪಟ್ಟಿದೆಯೆಂಬಂಶ ಬಹುಕಾಲ ತಜ್ಞರ ಗಮನಕ್ಕೆ ಬರಲಿಲ್ಲ. ಕರಗುವುದರಲ್ಲಿ ೧೬೮೦ ಡಿಗ್ರಿ ಸೆಂಟಿಗ್ರೇಡ್ ಬಿಂದುವಿಗೆ ಸಮನಾಗಿ ಅಲ್ಪಸಾಂದ್ರತೆ, ಅಧಿಕ ಉಷ್ಣತೆಯಲ್ಲೂ ನೀರಾಗದಿರುವ ಕರ್ಷಕ ಶಕ್ತಿ ಸುಲಭದಲ್ಲಿ ಕೆಲಸಕ್ಕೆ ಅನುಕೂಲಿಸುವ ಗುಣವೇ ಮೊದಲಾದ ಗುಣವಿದ್ದ ಟೈಟಾನಿಯಂ ಮುಂದಿನ ಒಂದು ಶತಮಾನದವರೆಗೂ ಯಾವುದೇ ಪ್ರಯೋಗಕ್ಕೂ ಬಳಸದೆ ನಿರುಪಯೋಗಿಯಾಗಿತ್ತು. ಟೈಟಾನಿಯಂನ ಉಪಯುಕ್ತತೆಯನ್ನು ಪ್ರಥಮವಾಗಿ ಶೋಧಿಸಿದ ಕೀರ್ತಿ ಹೆಸರಾಂತ ಲೋಹಶಾಸ್ತ್ರಜ್ಞ ಡಾ|| ಕ್ರೋಲ್ ಅವರಿಗೆ ಸಲ್ಲಬೇಕು.

ಇಂದು ಕೈಗಾರಿಕಾ ರಂಗದಲ್ಲಿ ಅತ್ಯುಪಯುಕ್ತವೆನಿಸಿ, ಇನ್ನೂ ಹೆಚ್ಚು ಹೆಚ್ಚು ಪ್ರಯೋಗಗಳಲ್ಲಿ ಅದನ್ನು ಬಳಸುವಂತೆ ಮಾಡಿದ ಸಂಶೋಧನೆಗಳಿಗಾಗಿ ಲಂಡನ್ನಿನ ಇನ್‌ಸ್ಟಿಟ್ಯೂಟ್ ಆಫ್ ಮೆಟಲ್ಸ್ ಸಂಸ್ಥೆಯು ೧೯೬೮ ರಲ್ಲಿ ಡಾ|| ಕ್ರೋಲ್ ಅವರಿಗೆ ಪ್ಲಾಟಿನಂ ಪ್ರಶಸ್ತಿ ಪದಕವನ್ನಿತ್ತು ಗೌರವಿಸಿದೆ.

ಟೈಟಾನಿಯಂ ತೂಕದಲ್ಲಿ ಹಗುರ, ಆದರೆ ಕಸುವಿನಲ್ಲಿ ಅದು ಇತರ ಯಾವುದೇ ಲೋಹದ ಶಕ್ತಿಯನ್ನೂ ಹಿಂದಕ್ಕಟ್ಟಿದೆ. ಇದು ಉಕ್ಕಿನಷ್ಟು ಭಾರವಿಲ್ಲದಿದ್ದರೂ ಅಲ್ಯುಮಿನಿಯಂಗಿಂತ ಎರಡು ಪಾಲು ತೂಕವಿದೆ ಕ್ಷಿಪ್ರ ವೇಗದ ವಾಯು ನೌಕೆಗಳ ನಿರ್ಮಾಣದಲ್ಲಿ ಅದು ವಹಿಸುತ್ತಿರುವ ಪಾತ್ರ ಮಹತ್ವಪೂರಿತವಾಗಿದೆ. ವಿಮಾನಗಳ ಎಂಜಿನುಗಳ ತಯಾರಿಕೆಯಲ್ಲಿ ಟೈಟಾನಿಯಂ ಉಪಯೋಗಿಸುವುದರಿಂದ ಅದರ ಭಾರವನ್ನು ಸುಮಾರು ಐದರಿಂದ ಎಂಟುಪಾಲು ತಗ್ಗಿಸಲು ಸುಲಭ ಸಾಧ್ಯವಾಗಿದೆ. ವಿಮಾನದ ಎಂಜಿನುಗಳ ಭಾರ ಕಮ್ಮಿಯಾದಷ್ಟೂ ಅಧಿಕವಾಗಿ ಪ್ರಯಾಣಿಕರನ್ನೂ, ಇಂಧನವನ್ನೂ ಸಲೀಸಾಗಿ ಸಾಗಿಸಬಹುದು.

ಆಕಾಶ ನೌಕೆಗಳ ಟರ್ಬೈನು ಬ್ಲೇಡುಗಳು, ದಹನ ಕೋಶಗಳು ಹಾಗೂ ಬಾಹ್ಯ ನಾಳಗಳು, ಅತ್ಯುಗ್ರ ಶಾಖವನ್ನೂ ತಡೆದುಕೊಳ್ಳುವಂತಿರಬೇಕು. ದಹನ ಕೋಶಗಳಲ್ಲಿ ಉತ್ಪನ್ನವಾಗುವ ಕೆಲವು ಕಾದ ಅನಿಲಗಳಂತೂ ಲೋಹ ಸಾಮುಗ್ರಿಗಳನ್ನು ಬಾಹ್ಯ ವಾತಾವರಣಕ್ಕಿಂತ ಸಹಸ್ರ ಪಟ್ಟು ಅಧಿಕ ತೀವ್ರತೆಯಿಂದ ಜಂಗು ಹಿಡಿಸುವುವು. ಇದರಿಂದಾಗಿ ಅವುಗಳಿಗೆಲ್ಲಾ ಬಳಸುವ ಲೋಹಗಳು ತುಕ್ಕು ನಿರೋಧಕವಾಗಿರಬೇಕಾಗಿದ್ದು ಅನಿವಾರ್ಯ. ತುಕ್ಕನ್ನು ನಿವಾರಿಸುವ, ಶಾಖದ ತೀವ್ರತೆಗೆ ಬದಲಾಗದ ಶಕ್ತಿ ಟೈಟಾನಿಯಂ ಲೋಹಕ್ಕೆ ಇದೆಯೆಂಬುದು ವಿಜ್ಞಾನಿಗಳನ್ನು ಹರ್ಷಗೊಳಿಸಿದೆ. ತುಕ್ಕನ್ನು ನಿವಾರಿಸುವ ಆಶ್ಚರ್ಯಕರ ಶಕ್ತಿ ಟೈಟಾನಿಯಂ ಗೆ ಇದೆಯೆಂದೇ ಸ್ಟೈನ್‌ಲೆಸ್ ಸ್ಟೀಲಿಗಿಂತಲೂ ಅದನ್ನು ಉತ್ತಮವೆಂದು ಪರಿಗಣಿಸಲಾಗಿದೆ. ಸಾವಿರಾರು ವರ್ಷ ಬರಿ ಮಣ್ಣಿನಲ್ಲಿ ಗಾಳಿ ಮಳೆಗಳ ಹೊಡೆತಕ್ಕೆ ಎದೆಯೊಡ್ಡಿ ಮಲಗಿದರೂ ಟೈಟಾನಿಯಂ ಫಳ ಫಳ ಹೊಳೆಯುತ್ತದೆ.

ಹಗುರ ಧಾತುಗಳೆನಿಸಿರುವ ಅಲ್ಯುಮಿನಿಯಂ, ಮೆಗ್ನೀಷಿಯಂ ಇತ್ಯಾದಿಗಳಿಂದ ತಯಾರಿಕೆಯಾದ ಎಂಜಿನುಗಳಿರುವ ವಿಮಾನಗಳು ಹೆಚ್ಚೆಂದರೆ ತಾಸಿಗೆ ಸಾವಿರ ಮೈಲು ವೇಗದಲ್ಲಿ ಮಾತ್ರ ಸಾಗಬಲ್ಲವು. ಆದರೆ ಟೈಟಾನಿಯಂ ಲೋಹದ ಎಂಜಿನುಗಳಿರುವ ಆಕಾಶ ನೌಕೆಗಳು ತಾಸಿಗೆ ೨೨೦೦ ಮೈಲಿಗಿಂತ ಹೆಚ್ಚು ದೂರವನ್ನು ಕ್ರಮಿಸಬಲ್ಲುವಲ್ಲದೆ ಇಂಥ ತೀವ್ರ ವೇಗದ ಉಡ್ಡಾಣದಲ್ಲಿಯೂ ೫೩೭ ಡಿಗ್ರಿ ಸೆಂಟಿಗ್ರೇಡ್ ಉಷ್ಣವನ್ನು ಎದುರಿಸಬಲ್ಲುವು. ನಿಕ್ಕಲ್ ಮತ್ತು ಕೋಬಾಲ್ಟ್‌ಗಳನ್ನು ಬಂಧಕ ಸಾಮುಗ್ರಿಗಳಾಗಿ ಟೈಟಾನಿಯಂ ನೊಂದಿಗೆ ಬೆರೆಸಿ ಉನ್ನತ ಶಾಖನಿರೋಧಕ ಸಾಧನಗಳನ್ನು ತಯಾರಿಸಲಾಗುತ್ತಿದೆ.

ಹಲವಾರು ರಾಸಾಯನಿಕ ಕೈಗಾರಿಕೋದ್ಯಮಗಳಲ್ಲಿ ನಿಕ್ಕಲ್ ಮತ್ತು ಅದರ ಮಿಶ್ರಲೋಹಗಳ ಬದಲಾಗಿ ಟೈಟಾನಿಯಂ ಹಾಗೂ ಇದರ ಮಿಶ್ರಲೋಹಗಳನ್ನು ಬಳಸುವುದು ಯೋಗ್ಯ ಪ್ರತಿಫಲದಾಯಕವಾಗಿದೆ. ಸೈಟ್ರಿಕ್ ಆಸಿಡ್, ಹೈಡ್ರೋಕ್ಲೋರಿಕ್



# ಕಲಾವಿದ ವಿ. ಎಸ್. ಬುರಾಣಪುರ [ವ್ಯಕ್ತಿ-ಚಿತ್ರಣ]

— ಎಂ. ನೀಲಾಂಬಿಕಾ ಎಂ. ಎ. ಬಿ. ಎಡ್. ಡಿಪ್. ಇನ್. ಫೋಕ್ಲೋರ್
242. ಉತ್ತರಾದಿ ಮಠದ ರಸ್ತೆ, ಮೈಸೂರು - 570004.

ಕಲೆಗೆ ಬೆಲೆಕಟ್ಟುವುದಕ್ಕೆ ಕಲಾ ಬ್ರಹ್ಮನಿಂದಲೂ ಸಾಧ್ಯವಿಲ್ಲ. ಮಾನವ ತನ್ನ ಮನದ ಭಾವನೆಯನ್ನು ಅನೇಕ ರೀತಿಯಲ್ಲಿ ವ್ಯಕ್ತಪಡಿಸಿದುದು ತಿಳಿದಿರುವುದಷ್ಟೆ. ಕೆಲವರು ಚಿತ್ರಗಳ ಮೂಲಕ, ಮಣ್ಣಿನ, ಲೋಹದ ವಸ್ತುಗಳ ಮೇಲೆ ಚಿತ್ರಗಳನ್ನು ಬರೆಯುವುದರ ಮೂಲಕ ವ್ಯಕ್ತಪಡಿಸಿದ್ದಾರೆ. ಕಲೆ ಜೀವನದ ಶೃಂಗಾರ ಸಂಸ್ಕೃತಿಯ ಬಂಗಾರ. ಪ್ರಕೃತಿಯಲ್ಲಿ ಕಂಡುಬಂದ ಮಹೋನ್ನತವನ್ನು ಹೊಸ ಭಾವನೆಗಳನ್ನು ರಾಗಮಾಧುರ್ಯಗಳನ್ನ, ಸೊಗಸನ್ನ, ಸೌಂದರ್ಯವನ್ನ, ಸತ್ಯದ ನೆಲೆಯನ್ನ, ತಾವು ಕಂಡುಂಡ ಭಾವನೆಗಳನ್ನ ತನ್ನ ಮನದಲ್ಲಿ ಕಂಡುಕೊಂಡು ಅದನ್ನು ಕಲಾರೂಪದಿಂದ ಅಭಿವ್ಯಕ್ತಗೊಳಸಿದ್ದಾನೆ. ಕಲಿಬ್ರಹ್ಮ. ಕಲೆ ಜೀವನದ ಜೀವಾಳವಾಗಿದೆ. ಜನಜೀವನದಲ್ಲಿ ಶಾಶ್ವತ ಆನಂದವನ್ನು ಬೆಳೆಸುವುದೆ ಕಲೆಯ ಕಾರ್ಯ. ಕಲೆಗಾರನು ಒಂದು ರೀತಿಯಲ್ಲಿ ತ್ಯಾಗಮಯಿ. ಕಲಾವಿದನ ಬುದ್ಧಿವಂತಿಕೆಯಿಂದ ಪ್ರತಿಭೆ ವಿಸ್ತಾರಗೊಳ್ಳುತ್ತದೆ. ತನ್ನ ಪ್ರತಿಭೆಯಿಂದ ಇಂಥ ಹೊಸರೀತಿಯ ಕಲೆಯನ್ನು ಚಿತ್ರಿಸುವುದೇ ಉತ್ತಮ ಕಲಾವಿದನ ಉತ್ತಮ ಗುಣ. ಇಂಥ ಉತ್ತಮ ಕಲಾಗುಣವನ್ನು ಬೆಳೆಸಿಕೊಂಡಿರುವ ಕಲಾವಿದ ವಿಶ್ವನಾಥ ಶಂಕರ ಬುರಾಣಪುರರವರು. ಅವರು ರಚಿಸಿದ ಕಲಾವೈಭವವನ್ನು ನೋಡುತ್ತ ಹೊರಟರೆ ಅದನ್ನು ವರ್ಣಿಸಲು ಮಾತು ಮೂಕವಾಗುತ್ತದೆ. ಮನ ಧನ್ಯತೆಯನ್ನರ್ಪಿಸುತ್ತದೆ. ಒಂದೊಂದು ಚಿತ್ರವೂ ಒಂದೊಂದು ಭವ್ಯದರ್ಶನ ಮಾಡಿಸುತ್ತದೆ. ಇಂಥ ಕಲೆಯನ್ನು ರಚಿಸಲು ಅವರು ಅನುಸರಿಸಿದ ಕ್ರಮವಾದರೂ ಯಾವುದು?

ಇಂಗ್ಲೀಷ್‌ನಲ್ಲಿ ಸ್ಟಿಪ್ಲಿಂಗ್ ಕಲೆ ಎಂದು ಕರೆಯಲ್ಪಡುವ ರಚನೆ ಇವರ ಕೈಲಿ ಸುಂದರವಾಗಿ ನುರಿತಿದೆ. ಚಿತ್ರರಚನೆಯ ರೇಖೆಗಳ ಬದಲು ಬಿಂದು ಅಥವಾ ಚುಕ್ಕಿಗಳ ಮೂಲಕ ಚಿತ್ರದ ನೆರಳು-ಬೆಳಕುಗಳ ಘನಾಕೃತಿಯ ಭ್ರಮೆ ಉಂಟುಮಾಡುವುದು ಚುಕ್ಕಿಗಳ ಪ್ರಮಾಣ ಮತ್ತು ಸಾಂಧ್ರತೆಯಿಂದ ಇಂಥ ಚಿತ್ರಕಲೆ ಅವರಿಗೆ ಚೆನ್ನಾಗಿ ಸಿದ್ಧಿಸಿದೆ.

26-6-38 ರಲ್ಲಿ ಜನಿಸಿದ ಈ ಕಲಾವಿದ ತಮ್ಮ 7 ನೇ ವರ್ಷದವರಾಗಿದ್ದಾಗ ಆಕಸ್ಮಿಕವಾಗಿ ಉಂಟಾದ ಆಘಾತಕ್ಕೆ ತುತ್ತಾಗಿ ಬಲಗಾಲಿಗೆ ಪೆಟ್ಟುಬಿದ್ದು ಅದು ಸರಿಹೋಗದೆ ಮನೆಯವರೆಲ್ಲ ವ್ಯಥೆಪಡುತ್ತಿದ್ದ ಸಂದರ್ಭದಲ್ಲಿ ಗದಗ್ ಬಳಿಯಿರುವ

ವಿಜಯಶಾಲೆಯ ಕಲಾ ವಿಭಾಗಕ್ಕೆ ಸೇರಿಸಿದರು. ಇಲ್ಲಿನ ಪ್ರಿನ್ಸಿಪಾಲರಾದ ಟಿ.ಪಿ ಅಕ್ಕಿ ಅವರು ಇವರಲ್ಲಿದ್ದ ಸಂಪೂರ್ಣ ಪ್ರತಿಭೆ ಹೊರಬರಲು ಪ್ರೋತ್ಸಾಹ ನೀಡಿದ್ದಾರೆ. ನಂತರ ಅವರು ಬಿಜಾಪುರದಲ್ಲಿ ಜನಸಿ ಗದಗ್‌ನಲ್ಲಿ ವಿದ್ಯಾಭ್ಯಾಸ ಮುಗಿಸಿ ಬಾಂಬೆಗೆ ಹೋಗಿ ಅಲ್ಲಿ ಬಂದಲ ಪುರದಲ್ಲಿ ವಾಸಿಸತೊಡಗಿದರು. ಈಗ ಅವರು ತಮ್ಮ ಪತ್ನಿ ಮತ್ತು ಇಬ್ಬರು ಮಕ್ಕಳೊಡನೆ ಥಾಣಾ ಜಿಲ್ಲೆಯ ಕಲ್‌ಗೋನ್ ಎಂಬ ಗ್ರಾಮದಲ್ಲಿ ಸಂತೋಷವಾಗಿ ವಾಸಿಸುತ್ತಿದ್ದಾರೆ. “ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪದು ಶಿವಂಗೆ” ಎಂಬಂತೆ ಕಷ್ಟದಲ್ಲಿ ಸುಖದಲ್ಲಿ ಸಮಭಾಗಿಗಳಾಗಿದ್ದಾರೆ.

ಈ ಕುಂಚ ಬ್ರಹ್ಮನ ಕೈಯ್ಯಲ್ಲಿ ರಚಿಸದ ವಸ್ತುವಿಲ್ಲ. ಯಾವುದನ್ನೇ ನೋಡಲಿ ಅದನ್ನು ಮನದಲ್ಲಿಟ್ಟು ರಚಿಸುವ ಕಲಾವಿದನಲ್ಲಿದ್ದ ಉತ್ತಮ ಗುಣ ಇವರದು. ಭಾರತಕ್ಕೆ ಸಂಬಂಧಪಟ್ಟ ಮುಖ್ಯ ನೇತಾರರು ಚಲನಚಿತ್ರ ಜಗತ್ತಿನಲ್ಲಿ ಮೆರೆದವರು. ದೇಶದ ರಾಜಕೀಯದಲ್ಲಿ ಮುಖ್ಯಸ್ಥರಾಗಿರುವ ವ್ಯಕ್ತಿಗಳ ಚಿತ್ರವಷ್ಟೇ ಅಲ್ಲ ಈ ಕುಂಚಬ್ರಹ್ಮನ ಕೈಯಿಂದ ರಚನೆಗೊಳ್ಳದ ವಿಷಯಗಳಿಲ್ಲ. ಇವರು ಪ್ರದರ್ಶನಕ್ಕಿಟ್ಟ ಚಿತ್ರಗಳಲ್ಲಿ ನನ್ನನ್ನು ಆಕರ್ಷಿಸಿದ್ದು ಅನೇಕ ಜಗದ್ಗುರುಗಳವರ ಚಿತ್ರಗಳು. ಮೂರುಸಾವಿರ ಮಠದ ಶ್ರೀಗಳವರು, ಸಿದ್ಧಗಂಗಾ ಶ್ರೀಗಳವರು, ನವಕಲ್ಯಾಣಮಠದ ಶ್ರೀಗಳವರು, ಸುತ್ತೂರು ಶ್ರೀಗಳವರು, ನೋಡುತ್ತ ಹೋದಂತೆ ಒಂದು ಭವ್ಯ ಜಗತ್ತನ್ನು ಕಂಡಂತೆ ಅನುಭವವಾಯಿತು. ಬಿಜಾಪುರದ ಕಟ್ಟಡಗಳು, ಒಂದು ಲಕ್ಷ ಪ್ರತಿ ಪ್ರಿಂಟಾಗಿರುವ ನರ್ಗೀಸ್ ದತ್ ಚಿತ್ರ, ಒಂದೇ! ಎರಡೇ? ಅವರು ರಚಿಸಿದ ವರ್ಣನೆಯನ್ನು ವರ್ಣಿಸಲಸಾಧ್ಯ. ಯಾವುದನ್ನು ವರ್ಣಿಸುವುದು? ಮಾನವನ ಮುಖದಲ್ಲಿ “ಓಂ”ಕಾರ ರೂಪಿಸಿದ ಚಿತ್ರ ಒಂದರೊಳಗೊಂದು ರಟ್ಟನ್ನು ಒಳಗೆ ಜೋಡಿಸುತ್ತ ಹೋದಂತೆ ಪೂರ್ಣ ಮುಖ ಒಂದೊಂದಾಗಿ ಮರೆಯಾಗಿ ಕಣ್ಣು, ಮೂಗು, ಇತ್ಯಾದಿ – ‘ಓಂ’ [ॐ] ಈ ರೂಪ ಕೊನೆಯಲ್ಲಿ ನಿಲ್ಲುತ್ತದೆ.

ಇಡೀ ಇಂಡಿಯಾದಾದ್ಯಂತ ತಮ್ಮ ಪ್ರದರ್ಶನವನ್ನು ಏರ್ಪಡಿಸುವುದರ ಜೊತೆಗೆ ಇಂಥ ಕಲಾಶಾಲೆಯನ್ನು ಎಲ್ಲೆಡೆ ಸ್ಥಾಪಿಸಬೇಕೆಂಬ ಉದ್ದೇಶ ಅವರದು. ಬಾಂಬೆಯಲ್ಲಿ ಅಂಗವಿಕಲರಿಗಾಗಿ ಈ ಕಲೆಯನ್ನು ಕಲಿಸಲು ಒಂದು ಕಲಾಶಾಲೆಯನ್ನು ರಚಿಸಿದ್ದಾರೆ. ತಾವು ಸಂಪಾದಿಸಿದ ಒಂದೊಂದು ಹಣವು ಇದಕ್ಕೆ ಖರ್ಚು ಮಾಡುತ್ತಿದ್ದಾರೆ. ಅನೇಕ ಪತ್ರಿಕೆಗಳು ಇವರನ್ನು ಕುರಿತು ಹೊಗಳಿವೆ. 1983ರಲ್ಲಿ ಇವರ ಪ್ರತಿಭೆಗೆ ಕನ್ನಡ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ದೊರೆತಿದೆ.

ಸೊಲ್ಲಾಪುರ, ಬಿಜಾಪುರ, ಧಾರವಾಡ, ಹುಬ್ಬಳ್ಳಿ, ಬೆಳಗಾವಿ, ಬೆಂಗಳೂರು, ಬಾಂಬೆ, ಗುಲ್ಬರ್ಗ, ಬೆಳಗಾಂ, ಮೈಸೂರು ಇನ್ನೂ ಅನೇಕ ಕಡೆ ಇವರ ಕಲೆ ಪ್ರದ

ರ್ಶನ ಗೊಂಡಿದೆ. 60 ಪತ್ರಿಕೆಗಳಲ್ಲಿ ಐದು ಭಾಷೆಗಳಲ್ಲಿ ಇವರ ಬಗ್ಗೆ ಲೇಖನ ರಚಿಸಿವೆ. ದೇಶದ ಪ್ರತಿಯೊಂದು ಸ್ಥಳಕ್ಕೂ ಸಂಚರಿಸುತ್ತ ತಮ್ಮ ಕಲಾಪ್ರದರ್ಶನ ನೀಡುತ್ತಿದ್ದಾರೆ ಈ ಕುಂಚಬ್ರಹ್ಮ.

ಒಟ್ಟಿನಲ್ಲಿ ಕಲಾ ಪ್ರಪಂಚದಲ್ಲಿ ಮಿನುಗುತ್ತಿರುವ ನಕ್ಷತ್ರ ಇವರು. ಈ ಮಹಾ ವ್ಯಕ್ತಿಯ ಸರಳತೆ, ಸಜ್ಜನಿಕೆ, ಗಾಂಭೀರ್ಯ, ತುಂಬುಹೃದಯ, ಆತ್ಮೀಯತೆ ಮುಂತಾದ ಕಲಾವಿದನಲ್ಲಿರುವ ಉತ್ತಮ ಗುಣಗಳಿಂದ ಇವರು ಮುಪ್ಪರಿಗೊಂಡಿದ್ದಾರೆ. ಇವರ ಕಲೆಯಲ್ಲಿ ಜೀವಂತತೆಯಿದೆ. ಹಗಲು ಇರುಳೆನ್ನದೆ ಸತತವಾಗಿ ಕಲಾಸೇವೆ ಸಲ್ಲಿಸುತ್ತಿದ್ದಾರೆ. ಇವರ ಚಿತ್ರಗಳಲ್ಲಿ ಕಲಾವಿದನ ಸಂತೃಪ್ತ ಜೀವನ ತುಂಬು ಹೃದಯವನ್ನು ಕಾಣಬಹುದು. ಹೀಗೆ ಚುಕ್ಕಿಗಳ ಸಾಂದ್ರತೆಯಿಂದ ಚಿತ್ರವನ್ನು ಒಡಮೂಡಿಸುವ ವ್ಯಕ್ತಿ ಇನ್ನೊಬ್ಬರಿಲ್ಲ ಎಂದರೆ ಅತಿಶಯೋಕ್ತಿಯಲ್ಲ. ಸರ್ಕಾರ ಇವರ ಪ್ರತಿಭೆ ಗುರುತಿಸಿದೆ ನಿಜ. ಈ ಉತ್ತಮ ಕಲೆಯನ್ನು ಇತರರು ಮೈಗೂಡಿಸಿಕೊಂಡು ಅದು ದೇಶದಾದ್ಯಂತ ಹರಡಲಿ ಎಂಬ ಆಶೆ ಈ ಕಲಾವಿದರದು. ಈ ಕಲಾವಿದ ರಚಿಸಿದ ಕಳಿಸಿದ ಶ್ರೀಗಳವರ ಈ ಭಾವಚಿತ್ರವನ್ನು 'ಸಿದ್ಧಗಂಗಾ'ದಲ್ಲಿ ಪ್ರಕಟಿಸಿ ತನ್ಮೂಲಕ ಅವರ ಕಲೆ ಬೆಳಕಿಗೆ ಬರಲಿ ಶ್ರೀಗಳವರ ಆಶೀರ್ವಾದ ಅವರಿಗೆ ದೊರಕಿ ಅವರ ಕೀರ್ತಿ ಇನ್ನೂ ಹೆಚ್ಚು ಬೆಳಗಲೆಂದು ಜಗಜ್ಜ್ಯೋತಿ ಬಸವಣ್ಣನನ್ನು ಬೇಡಿ ನನ್ನ ಲೇಖನಿಗೆ ವಿರಾಮ ಕೊಡುತ್ತೇನೆ.

●

---






ಆಸಿಡ್‌ಗಳೂ ಅವುಗಳ ಮಿಶ್ರಣಗಳೂ ಕ್ಲೋರಿನ್ ಮತ್ತಿತರ ಸಂಯುಕ್ತ ಲೋಹಗಳೂ
ಬೀರುವ ಯಾವ ದುಷ್ಪರಿಣಾಮವೂ ಟೈಟಾನಿಯಂನ ಮೇಲೆ ಉಂಟಾಗುವುದಿಲ್ಲ.
ಸಮುದ್ರದ ನೀರಿನಿಂದ ಹೆಚ್ಚಿನಂಶ ಲೋಹಗಳು ಪತನ ಹೊಂದುವವಾದರೂ ಅದು
ಟೈಟಾನಿಯಂನ್ನು ಏನೂ ಮಾಡಲಾರದು. ಇದರಿಂದಾಗಿ ಜಲಸಾರಿಗೆ ವಾಹನಗಳ
ಎಂಜಿನ್‌ಗಳಿಗೂ ಇದನ್ನು ಬಳಸುವ ಯೋಜನೆ ವಿಜ್ಞಾನಿಗಳಲ್ಲುಂಟು.

ಟೈಟಾನಿಯಂನ ಇನ್ನುಳಿದ ಉಪಯೋಗಗಳು ವೈವಿಧ್ಯಮಯ. ವೈದ್ಯಕೀಯ
ರಂಗದಲ್ಲಿ ಅದರ ಸೇವೆ ಮಹತ್ವಪೂರ್ಣ. ಟೈಟಾನಿಯಂ ಮತ್ತು ಮಾನವನ ಮೂಳೆ
ಗಳ ಸಾಂದ್ರತೆ ಏಕಪ್ರಕಾರವಾಗಿರುವುದರಿಂದ ಶರೀರ ಅದನ್ನು ಪ್ರತಿರೋಧಿಸುವುದಿಲ್ಲ.
ಸೊಂಟ, ಮೊಣಕೈಗಳ ಕೀಲುಗಳು ಮುರಿದರೆ ಅವುಗಳನ್ನು ಟೈಟಾನಿಯಂನ ಸಹಾಯ
ದಿಂದ ಸಂದುಗೂಡಿಸಬಹುದು. ಟೈಟಾನಿಯಂನಲ್ಲಿ ವಿಷದ ಅಂಶವಿಲ್ಲ.

ನಂಜಿನ ಲವಲೇಶವಿಲ್ಲದ ಟೈಟಾನಿಯಂನ ಉಪಯೋಗ ಶ್ರವಣಾತೀತ ಸಾಮಗ್ರಿ
ಗಳ ತಯಾರಿಕೆಯಲ್ಲೂ ಹೆಚ್ಚಾಗಿದೆ. ಬೇರಿಯಂನೊಂದಿಗೆ ಸಂಯುಕ್ತಗೊಂಡ ಟೈಟಾ
ನಿಯಂನಿಂದ ಪ್ರತಿಧ್ವನಿವಾಹಕವೂ ಶ್ರವಣಾತೀತವೂ ಆದ ಸಲಕರಣೆಗಳನ್ನು ತಯಾ
ರಿಸುತ್ತಿದ್ದಾರೆ. ಟೈಟಾನಿಯಂ ಡೈ ಆಕ್ಸೈಡಿನ ಬಿಳಿಯ ವರ್ಣದ ಹುಡಿಗೆ "ಟೈಟಾ
ನಿಯಂ ವೈಟ್" ಎಂದು ಕರೆಯಲಾಗುತ್ತಿದೆ. ಈ ಹುಡಿಯನ್ನು ಬಿಳಿಯ ಪೋಸ್ಟರು
ಬಣ್ಣಗಳನ್ನು ಉತ್ಪಾದಿಸಲು ಅಧಿಕವಾಗಿ ಬಳಸುತ್ತಾರೆ.

ಈಗೀಗ ಟೈಟಾನಿಯಂನಿಂದ ತಯಾರಿಸಿದ ಗೋಲ್ಡ್ ಕವರಿಂಗ್ ಒಡವೆಗಳೂ
ಮಾರುಕಟ್ಟೆಗೆ ಬರತೊಡಗಿವೆ ತೀರ ಅಗ್ಗ ಬೆಲೆಗೂ ದೊರಕುತ್ತವೆ. ಆದರೂ ಅಗ್ಗ
ಬೆಲೆ ಎಂಬ ಆಕರ್ಷಣೆಯ ಹೊರತು ಬಹಳ ಮೃದುವಾದ ಈ ಆಭರಣಗಳು ದೀರ್ಘ
ಕಾಲದ ಬಳಕೆಗೆ ಹೊರತಾಗಿವೆ.

ಟೈಟಾನಿಯಂ ಆಕ್ಸೈಡಿನ ಉತ್ಪಾದನಾ ವೆಚ್ಚ ಅಧಿಕವಾಗಿಲ್ಲ. ಅಲ್ಯುಮಿನಿಯಂ
ಗಿಂತಲೂ ಅದರ ಉತ್ಪನ್ನದ ಖರ್ಚು ಅಲ್ಪ. ಆದರೂ ಅಧಿಕ ಸಾಧನಗಳನ್ನು ತಯಾ
ರಿಸಿ ಹೆಚ್ಚಿನ ಉಪಯೋಗ ಪಡೆಯಬಹುದು.

ಜಗತ್ತಿನ ಎಲ್ಲೆಡೆಯೂ ಕೈಗಾರಿಕಾ ರಂಗಗಳಲ್ಲಿ ಟೈಟಾನಿಯಂ ಅದಿರು ಬೇಡಿಕೆ
ಜಗತ್ತಿನ ಎಲ್ಲೆಡೆಯೂ ಕೈಗಾರಿಕಾ ರಂಗಗಳಲ್ಲಿ ಟೈಟಾನಿಯಂ ಅದಿರು ಬೇಡಿಕೆ ಪಡೆಯುತ್ತಿದೆ. ನಿರುಪಯೋಗಿಯಾಗಿ ಮೂಲೆ ಸೇರಿದ್ದ ಅದು ಡಾ|| ಕೋಲಾರಿಂದಾಗಿ
ಜನಮನ್ನಣೆ ಗಳಿಸಿದೆ.

●

# ಗ್ರಾಮಾಂತರ ಬಸವ ಜಯಂತಿ

— ಹೆಚ್. ವಿ. ವೀರಭದ್ರಯ್ಯ

ನೆಲಮಂಗಲ: ಪವಾಡದ ಬಸವಣ್ಣ ದೇವರ ಮಠ, ಸದಾಶಿವ ಸ್ವಾಮಿಗಳು ಕರ್ಮಶೀಲರು. ಶಿವಯೋಗಿಯ ಶರೀರವ್ಯಕ್ತಾ ಸವೆಯಲಾಗದು ಎಂಬುದನ್ನು ಅನಷ್ಠಾನಕ್ಕೆ ತಂದು ಕೊಂಡ ಮುಗ್ಧ ಮೂರ್ತಿ. ಕತ್ತೆಗಳು ಮಲಗುತ್ತಿದ್ದ ಹಾಳು ಬಿದ್ದ ಮಠವನ್ನು ಬೆಳಕಿನ ಕಳಶವಾಗಿಸಿದ ಪವಾಡ ಪುರುಷರು. ಜಾಗೃತ ಸ್ಥಾನವಾಗಿದೆ ಇಂದು ಶ್ರೀಮಠ. ಸಮರ್ಥರು ಶ್ರಮಿಸಿದ ಪರಿಣಾಮದ ಫಲ ನೆಲಮಂಗಲ ಬೆಂಗಳೂರಿನ ಸೆರಗಿನಲ್ಲಿ ಪವಾಡದ ಬಸವಣ್ಣ ದೇವರ ಮಠ ಆ ಅಂಚಿನಲ್ಲಿ. ಶರಣಧರ್ಮದ ಷಟ್‌ಸ್ಥಲ ಧ್ವಜ ಬಾನಂಚಿನಲ್ಲಿ. ಯಾಂತ್ರಿಕ ಜೀವನಕ್ಕೆ ಬೇಸತ್ತ ಜೀವಗಳಿಗೆ ಶಾಂತಿ ಕೊಡುವ ತಂಗು ಧಾಣ ಅವಿಮುಕ್ತ ಕ್ಷೇತ್ರ ಶ್ರೀಮಠ ಇಂದು.

9-3-85 ರಂದು ಬಸವ ಜಯಂತಿ ಶ್ರೀಮಠದಲ್ಲಿ ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಗಂಗಾ ಸ್ವಾಮಿಗಳ ಉತ್ಸವ, ಕೆಂಗಾವಿಯ ಶರಣಧ್ವಜ ಪುಷ್ಪಾಲಂಕೃತ ಯಾಂತ್ರಿಕ ರಥ. ವಿವಿಧ ಮಠಗಳ ಶ್ರೀ ಶ್ರೀ ಗಳವರ ಸಮಾವೇಶ ಭಕ್ತವೃಂದದ ಉತ್ಸಾಹದ ಜಯಘೋಷ ಪೂಜ್ಯ ಶ್ರೀ ಶ್ರೀ ಗಳವರು, ಬಸವಣ್ಣನವರ ವಚನ ಗ್ರಂಥವನ್ನು ಮುಂದಿಟ್ಟು ರಥಾರೋಹಣ, ಮೊದಲು ಅಪ್ಪಗಳ ವಚನ ಸಂಪುಟಕ್ಕೆ ಪುಷ್ಪಾರ್ಚಣೆ. ಅನಂತರ ಪೂಜ್ಯ ಪಾದಗಳಿಗೆ ಪುಷ್ಪವೃಷ್ಟಿ, ಒಂದು ಕಿಲೋಮಿಟರ್ ದೂರದ ಕ್ರಮಬದ್ಧ ವಿದ್ಯುತ್ ಉತ್ಸವ ಮುತ್ತೈದೆಯರಿಂದ ಮಂಗಳ ಕುಂಭ ಮೆರವಣಿಗೆ. ಹಬ್ಬವಾಯಿತ್ತು ಭಾವುಕಕಂಗಳಿಗೆ.

ಸಭಾವೇದಿಕೆ ಭವ್ಯತೆಗೊಂದು ನಿದರ್ಶನ, ಅಚ್ಚುಕಟ್ಟಾದ ವ್ಯವಸ್ಥೆ. ಸದಾಶಿವ ಸ್ವಾಮಿಗಳ ಕಣ್ಣೆಚ್ಚರಿಕೆಗೊಂದು ನಿದರ್ಶನ. ಹತ್ತು ಘಂಟೆಗೆ ಸೋದರಿ ಜಗದಾಂಬ ಸಂಗಡಿಗರಿಂದ " ಉದಯವಾಗಲಿ ನಮ್ಮ ಶರಣ ಸನ್ಮತನಾಡು " ಗೀತೆಯೊಂದಿಗೆ ಪ್ರಾರ್ಥನೆ. ಶ್ರೀ ನಟರಾಜರವರಿಂದ ಕಾರ್ಯಕ್ರಮದ ನಿರೂಪಣೆ, ಒಪ್ಪವಿಟ್ಟ ಮಾತು; ಅಪ್ಪಿಕೊಳ್ಳುವಷ್ಟು ಸೊಗಸು ನಿರೂಪಣೆ.

ಬೆಂಗಳೂರಿನ ಬೇಲಿ ಮಠದ ಪೂಜ್ಯ ಶ್ರೀ ಶ್ರೀ ಗಳವರು "ಬಸವಣ್ಣನವರು ದೊಡ್ಡವರಾದದ್ದು ಜಗದ್ಗುರು ಪೀಠವೇರಿ ಅಲ್ಲ, ಮಂತ್ರಿಗಳ ಅಳಿಯನಾಗಿ ಅಲ್ಲ, ಯೋಗಿಯೂ ಅಲ್ಲ, ಜಗದ್ಗುರು ಪೀಠಕ್ಕಿಂತ ದೊಡ್ಡದಾದ ಜಗದ ಅಣ್ಣನಾಗಿ ದೊಡ್ಡವರಾದರು. 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ವಿನಯದಿಂದ ದೊಡ್ಡವರಾದರು. ಇಂದು, ಸಮಾಜೋಧಾರ್ಮಿಕ ಕ್ರಾಂತಿಯ ಹರಿಕಾರರಾಗಿ ಸಿದ್ಧಗಂಗಾ ಶ್ರೀಗಳವರು ನಾಡಿನುದ್ದಗಲದಲ್ಲಿ ಯಾತ್ರೆ ಕೈಗೊಂಡಿದ್ದಾರೆ. ನಾಡಿನ ಸಮಾಜದ ಮಹಾ ಭಾಗ್ಯ ಇಂದು ಎಂಬುದಾಗಿ ಸಭಾರಂಭದ ಉದ್ಘಾಟನೆಯನ್ನು ಮಾಡುತ್ತ ನುಡಿದರು.



"ನುಡಿದರೆ ಮುತ್ತಿನ ಹಾರದಂತಿರಬೇಕು," ಅಂತೆಯೇ ನಡೆದರೆ ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀ ಗಳಂತಿರಬೇಕು ಎಂದು ಆಶೀರ್ವಚನ ಮಾಡಿದರು ಕನಕಪುರ ದೇಗುಲ ಮಠದ ಶ್ರೀ ಶ್ರೀ ಗಳವರಾದ ಮುಮ್ಮಡಿ ನಿರ್ವಾಣಸ್ವಾಮಿಗಳವರು.

ಬಸವಣ್ಣ ಬಾಳುವುದನ್ನು ಕಲಿಸಿದ. ಅರಿತು ಸಾಯುವುದನ್ನು ಕಲಿಸಿದ ಎಂಬುದಾಗಿ ನುಡಿದರು ಪಂಡಿತ ಚನ್ನಪ್ಪ ಎರೆಸೀಮೆಯವರು.

ಬಸವಣ್ಣನವರ ಪ್ರತಿಮೂರ್ತಿಗಳಾದ ಸಿದ್ಧಗಂಗಾ ಶ್ರೀ ಶ್ರೀ ಗಳವರ ಮಹಾಮಣಿಹದ ಮಂಗಳ ದೀಪದ ಬೆಳಕಿನಲ್ಲಿ ಬೆಳೆದು ಬಂದ ಭಾಗ್ಯ ನನ್ನದು ಎಂದು ನುಡಿದರು ನೆಲಮಂಗಲ ತಾಲ್ಲೂಕು ತಹಸೀಲ್ದಾರರಾದ ಶ್ರೀ ಬೈಯಪ್ಪರೆಡ್ಡಿಯವರು.

Basavanna is a social, Spiritual and experimental scientist, ಬಸವತತ್ವ ಪ್ರಯೋಗ ಶಾಲೆಯನ್ನು ನಿರ್ಮಿಸಿದ ಶಿಲ್ಪಿ ಸಿದ್ಧಗಂಗಾ ಶ್ರೀ ಶ್ರೀ ಗಳವರು ಎಂದು ಶ್ರೀ ಡಿ. ರಾಮಪ್ಪನವರು ನುಡಿದರು.

ಇಂದು ಜಗತ್ತನ್ನೇ ತಿಳಿದುಕೊಳ್ಳಬಲ್ಲ ವ್ಯಕ್ತಿ ತನ್ನನ್ನು ತಾನು ತಿಳಿದು ಕೊಳ್ಳುವಲ್ಲಿ ವಿಫಲನಾಗುತ್ತಿದ್ದಾನೆ. ಏನಾದರೇನಣ್ಣ ತಾನಾಗದನಕ. ಬಸವಣ್ಣನವರು ಮೊದಲು ಮಾಡಿದ್ದು ತನ್ನನ್ನು ತಾನು ತಿಳಿದು ಕೊಳ್ಳುವ ಮಹಾ ಮಣಿಹವನ್ನು ಆದರಿಂದಲೇ ಅವರು ಜಗತ್ತಿನ ಮಹಾ ಬೆಳಕಾಗಿ ಬಂದರು, ಎಲ್ಲರೂ ಜಗತ್ತಿನ ಗುರುಗಳಾಗಲು ಸಾಧ್ಯವಿಲ್ಲ ಆ ಬಸವಣ್ಣ ಲೋಕಗುರು ವಾದುದ್ದು ಮೊದಲು ಗರ್ವ ದೂರನಾಗಿ, ಅನಂತರ ವಿನಯವೇರುವಾಗಿ, ಸಿದ್ಧಗಂಗಾ ಶ್ರೀ ಶ್ರೀಗಳವರು ನಡೆಸಿರುವ ಬಸವ ಸೇವಾ ಯಜ್ಞ ಪವಾಡ ಸದೃಶವಾದದ್ದು. ಎಂದರು ಶ್ರೀ ಬಿ. ವೀರಭದ್ರಯ್ಯನವರು.

ನಮ್ಮ ದೇಶದ ಜನಸಾಮಾನ್ಯರನ್ನು ಶಂಕರಾಚಾರ್ಯರು, ಮಧ್ವಾಚಾರ್ಯರು, ರಾಮಾನುಜಾಚಾರ್ಯರು, ಅರವಿಂದ ಘೋಷರು, ಮುಟ್ಟಲಿಲ್ಲ. ಅವರ ಬಳಿಗೆ ಹೋಗಲು ಪ್ರಯತ್ನ ಮಾಡಲಿಲ್ಲ ಆ ಕೆಲಸವನ್ನು ಬಸವಣ್ಣ ಮಾಡಿದರು; ತ್ರಿಕರಣ ಶುದ್ಧಿಯಿಂದ ಮಾಡಿದರು ಬಸವಣ್ಣ. ಹೋದದ್ದು ಬುದ್ಧಿಜೀವಿಗಳ ಬಳಿಗೆ ಅಲ್ಲ; ಮುಗ್ಧ ಜೀವಿಗಳ ಬಳಿಗೆ ಇಂದೂ ಕೂಡ ಜಗತ್ತಿನಾದ್ಯಂತ ರಾಮಕೃಷ್ಣ ಮಠಗಳು ಸ್ಥಾಪನೆಯಾಗಿರುವುದು ಸೇವೆ ಮಾಡುತ್ತಿರುವುದು ಕೇವಲ ನಗರ ಪಟ್ಟಣಗಳಲ್ಲಿ; ಗ್ರಾಮಗಳಲ್ಲ. ಗಾಂಧೀಜಿ ಹೇಳುತ್ತಿದ್ದರು ದೇಶದ ಆತ್ಮ ಹಳ್ಳಿಗಳಲ್ಲಿದೆ ಎಂದು. ಬಸವಣ್ಣ ಮಾಡಿದ ಸೇವೆ ಸಮಾಜದ ಅತ್ಯಂತ ಕೆಳಗಿನ ಸ್ತರದ ಬಂಧುಗಳಿಗೆ ಲಭ್ಯವಾಯಿತು, ಈ ದೇಶ 'ವರ್ಣವಾದ'ದಿಂದ ಮುಕ್ತವಾಗದ ಹೊರತು ಉದ್ಧಾರವಾಗದು. ಬಸವಣ್ಣ ಇದನ್ನರಿತೇ ಪ್ರಶ್ನಿಸಿದ್ದು "ವರ್ಣಾನಾಂ ಕಿಂ ಪ್ರಯೋಜನಂ" ಎಂಬುದಾಗಿ ಎಂದು ವಿಶ್ಲೇಷಿಸಿದರು ಶ್ರೀ ಎ. ವಿ. ಸಂಗಮದರವರು.

ಬಸವಣ್ಣ ಕಲಿಸಿದಕಾಯಕತತ್ವವನ್ನು ಅಪ್ಪಿಕೊಂಡವರು ಹಳ್ಳಿಗರು. ದುಡಿದು
ಣ್ಣ ವ ಸಾರ್ಥಕ ಜೀವಿಗಳವರು. ಕಾಯಕತಕ್ಕೆಷ್ಟು ಫಲ ಬೇಡಿದವರು "ಕಾಣಿಯಸೋ
ಲದೆ; ಅರ್ಧವಾಣಿಯ ಗೆಲ್ಲದೆ " ಜೀವಿಸಿರುವ ಜೀವನಯೋಗಿಗಳು ಅವರು. ಅವರ
ಅಂತಃಕರಣವಾದ ಶುದ್ಧ ಸ್ಫಟಿಕ ಶಿಲ್ಪವಾಗಿ ಎದ್ದು ಬಂದಿದ್ದಾರೆ ಬಸವಣ್ಣ ಜನಪದದ
ಹಾಡುಗಳಲ್ಲಿ. ಕುಟ್ಟುವಾಗ, ಬೀಸುವಾಗ, ಅಳುವಾಗ ನಗುವಾಗ, ಮಲಗುವಾಗ,
ಏಳುವಾಗ, ಉಂಬಾಗ, ಉಡುವಾಗ, ಅವರು ನುಡಿಕಲಿಸಿದ, ನಡೆಕಲಿಸಿದ, ಉಣಕ
ಲಿಸಿದ, ಉಡಕಲಿಸಿದ ಬಸವಣ್ಣನನ್ನೂ ಎದೆತುಂಬಿ ಹಾಡಿದ್ದಾರೆ. ಬಸವಣ್ಣ ಯಾರಿಗಾಗಿ
ತನ್ನನ್ನು ಅರ್ಪಿಸಿಕೊಂಡನೋ ಅವರು ಅವನನ್ನು ತಲೆಯಮೇಲಿಟ್ಟು ಕೊಂಡು ಕುಣಿ
ದಾಡಿದ್ದಾರೆ. ನಾವು ಬೆಳೆದಷ್ಟು ಎತ್ತರಕ್ಕೆ ಬೆಳೆಯುತ್ತಾನೆ ಬಸವಣ್ಣ. ಆ ಬಸವಣ್ಣ
" ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲವಾಗಿದ್ದಾನೆ ಎಂದು ಹಾಡಿದರು
ಶ್ರೀ ಹೆಚ್. ವಿ ವೀರಭದ್ರಯ್ಯನವರು.

ಬಸವ ಜಯಂತಿಯ ಅವಶ್ಯಕತೆ ಎಂದಿಗಿಂತ ಇಂದು ಹೆಚ್ಚು ಅಗತ್ಯವಾಗಿದೆ.
ಸಾರ್ವಕಾಲಿಕವಾದವು ಬಸವಣ್ಣನವರ ಸಂದೇಶಗಳು. ಸವಾಡದ ಬಸವಣ್ಣ ದೇವರ
ಮಠದ ಶ್ರೀ ಶ್ರೀ ಗಳು ಉತ್ತಮವಾದ ವ್ಯವಸ್ಥೆ ಮಾಡಿ, ಆಸ್ತಿಕ ಬಂಧುಗಳಿಗೆ ಜ್ಞಾನದಾ
ಸೋಹದ ಹೊಳೆ ಹರಿಸಿದ್ದಾರೆ. ಸಂತೋಷದಾಯಕವಾದ ಕೆಲಸ, ಪುಣಿಹ. ಭಾರತೀ
ಯರು ಜಗತ್ತಿಗೇ ಬೆಳಕನ್ನು ಕೊಟ್ಟವರು. ಯಾವುದೇ ಒಂದು ರಾಷ್ಟ್ರಕ್ಕೆ ರಾಜಕೀಯ
ಸ್ವಾತಂತ್ರ್ಯವೇ ಕೊನೆಯದಲ್ಲ ಅದು ಜನಾಂಗದ ಸರ್ವತೋಮುಖ ಅಭಿವೃದ್ಧಿಯನ್ನು
ಪೂರೈಸಬೇಕು. ಸಮಗ್ರ ಬದುಕನ್ನು ತುಂಬುವಂತಾಗಬೇಕು. ಆ ಮೂಲಕ ಸಮಸ್ಯೆ
ಗಳಿಗೆ ಪರಿಹಾರ ಕಂಡು ಕೊಳ್ಳುವಂತಿರಬೇಕು ರಾಷ್ಟ್ರವನ್ನು ಮೇಲೆತ್ತುವ ಪ್ರಯತ್ನದಲ್ಲಿ
ನಮ್ಮ ಕರ್ತವ್ಯವೇನು? ಕೊಡುಗೆಯೇನು ? ಎಂಬುದನ್ನು ಆಲೋಚಿಸಿ ಆಚರಣೆಗೆ
ತರುವುದಾಗಬೇಕು ಬಸವಣ್ಣನವರ ತತ್ವಗಳು ಇದಕ್ಕೆ ದಾರಿದೀಪಗಳಾಗಿವೆ. ನಾವಿಂದು
ಆಗಿರುವುದಾದರೂ ಏನು ? ಜೊಳ್ಳುಮಾತೆಂದರೆ ನಲಿನಲಿದಾಡುವರು, ಕಾಳುಗೆಲಸ
ವೆಂದರೆ ನಲಿನಲಿದು ಮಾಡುವರು, ಗುರುಸೇವೆಯೆಂದರೆ ಬೇಸರಿಸುವರು, ಲಿಂಗಪೂಜೆ
ಯೆಂದರೆ ಅಳಲುವರು, ಬಳಲುವರು " ವ್ಯರ್ಥಕಾಲಹರಣ ಇಂದು ಎತ್ತೆತ್ತಲೂ
ನಡೆದಿದೆ ಸಂಕಲ್ಪ ಜೀವಿಗಳಿಗಿಂದು ಅಭಾವ. ಸೋಮಾರಿ ಜೀವನದ ಜಾತ್ರೆಯೇ
ವಿಜೃಂಭಿಸಿದೆ ರಾಷ್ಟ್ರಪ್ರಜ್ಞೆ ಕಾಣುತ್ತಿಲ್ಲ, ಇದು ರಾಷ್ಟ್ರಕ್ಕೆ ಭೂಷಣವಲ್ಲ. ಬಡತನದ
ತಾಂಡವ ನೃತ್ಯ ಎಲ್ಲೆಲ್ಲೂ–ಹಳ್ಳಿ ದಿಳ್ಳಿಗಳಲ್ಲಿ ನಡೆದಿದೆ, ಆಡಳಿತ ಸೂತ್ರ ಹಿಡಿದವರಿಗೆ
ನೋವಿನ ಅನುಭವವಿಲ್ಲ ನೊಂದ ನೋವ ನೋಯದವರೆತ್ತ ಬಲ್ಲರು. ಬಸವಣ್ಣನಂಥ
ಮಾನವತಾವಾದಿ ಜಗತ್ತಿನಲ್ಲಿ ಇನ್ನೊಬ್ಬರಿಲ್ಲ. ಅಭಿಮಾನದ ಮಾತಲ್ಲ ವಿಚಾರವಂತರ
ಮಾತು ಬಸವಣ್ಣ ಕಂಗಾಲಾದ ಜನತೆಗೆ, ದಿಕ್ಕೆಟ್ಟ ಬದುಕಿಗೆ ಪುಂಜುಪುರುಷನಾಗಿ
ಬಂದ. ಮುಟ್ಟದ್ದೆಲ್ಲವನ್ನೂ ಪವಿತ್ರಮಾಡಿದ. ಇಂದು ಮಾನವನ ಮೂರರ ದಾಸನಾ



ಗಿದ್ದಾನೆ. ಅಧಿಕಾರ, ಐಶ್ವರ್ಯ, ಭೋಗದ ದಾಹಕ್ಕೆ ದಾಪುಗಲು ಹಾಕಿದ್ದಾನೆ. ಆ ಅನಿಷ್ಟ
ಪರಿಹಾರಕ್ಕೆ, ಹೊಸಚೈತನ್ಯಕ್ಕೆ ಪರಿಶುದ್ಧ ರಕ್ತದಾನಕ್ಕೆ ಯಾವಜನಾಂಗದ ಶುಭ
ಜೀವನ ಸಿದ್ಧತೆಗಾಗಿ ಬಸವ ಸಂದೇಶ ಅಗತ್ಯವಾಗಿಬೇಕು. " ಕುರ್ವನ್ನೇವೇಹ
ಕರ್ಮಾಣಿ " ಎಂಬ ಉಪನಿಷದ್ವಾಕ್ಯವನ್ನು ಅರ್ಥಪೂರ್ಣಮಾಡಿದ ಸಿದ್ಧಾಂತ ಬಸವ
ಣ್ಣನವರ ಜೀವನ ಸಿದ್ಧಾಂತ. ಆ ಸಿದ್ಧಾಂತ ಜೀವನ ಸಮೃದ್ಧಿಗಾಗಿ ಬಂದ ಸಿದ್ಧಾಂತವೇ
ವಿನಾ, ಬೇರೆಸಿದ್ಧಾಂತಗಳಂತಲ್ಲ. ಮನುಷ್ಯ ಕಾಯಕಜೀವಿಯಾಗಿಯೇ ಬಾಳಬೇಕು.
ಕಾಯಕ ಯಾವುದಾದರೇನು, ಪರಿಶುದ್ಧವಾಗಿದ್ದರೆ, ಪ್ರಾಮಾಣಿಕತೆಯಿಂದ ಕೊಡಿದ್ದರೆ
ದೇವರಪ್ಪೆಟ್ಟ ಪೂಜ್ಯ ಮಡಿವಾಳ ತಂದೆಗಳ ಬಟ್ಟೆಗಳ ನಾನೊಗೆಲೆ–ಆವಾವ ಕಾಯಕವ
ಮಾಡಿದಡೆ ಬಸವೇಶ " ಎಂದು ಶರಣರ ನುಡಿಮುತ್ತು ನಮಗಿಂದು ಮಾರ್ಗದರ್ಶ
ಕವಾಗಬೇಕು ಆರ್ಥಿಕ ಪ್ರಪಂಚದಲ್ಲಿ ಬಸವಣ್ಣ ಮಾಡಿದ ಪರಿವರ್ತನೆ ಅದ್ಭುತವಾದುದು;
ಊಹಾತೀತವಾದುದು. Production and Distribution ಸಮರ್ಪಕವಾಗಿ
ವಾಗಿರಬೇಕು. ಯಾವಗಳಿಕೆಯೂ ಅಪವ್ಯಯವಾಗಬಾರದು; ಅಥವಾ ಯಾರ ದುಡಿ
ಮೇಯ ಉತ್ಪಾದನೆಯು ಶೋಷಣೆಯಾಗಬಾರದು. ಸಂಪತ್ತು ಭೌತಿಕ ಪಡಿಪದಾರ್ಥ
ಗಳಲ್ಲಿಲ್ಲ. ಅದಿರುವುದು ಶುದ್ಧ ಚಾರಿತ್ರ್ಯದಲ್ಲಿ, ಶುದ್ಧ ದುಡಿಮೆಯಲ್ಲಿ ಶುದ್ಧಗಳಿಕೆ
ಯಲ್ಲಿ. ಶೀಲಸಂಪತ್ತಿಗಿಂತ ದೊಡ್ಡದು ಯಾವುದೂ ಇಲ್ಲ. ರಾಷ್ಟ್ರ ಜೀವನ ತುಂಬಿ
ಬರಬೇಕಾದರೆ ಹೆಣ್ಣು ಮಕ್ಕಳ ಜೀವನ ಸುಸಂಸ್ಕೃತವಾದುದಾಗಿರಬೇಕು. ಸಮಾಜದ
ಒಮ್ಮುಖ ಪುರುಷನಾದರೆ ಮತ್ತೊಂದು ಮುಖ ಸ್ತ್ರೀ. ಆ ಮುಖದ ಪಾವಿತ್ರ್ಯ ಈ
ಮುಖಕ್ಕೆ ಗೌರವ. ತನ್ನ ಪುಣ್ಯಾಂಗನೆಯರ ಸಹಕಾರ, ಸೇವೆಇಲ್ಲದೇ ಹೋಗಿದ್ದರೆ
ಬಸವಣ್ಣನವರು ಮಹತ್ತರ ಸೇವೆ ಮಾಡಲಾಗುತ್ತಿರಲಿಲ್ಲ. ಬಸವಣ್ಣ ಜೀವನದ ಸಮಗ್ರ
ಮುಖದ ಉದ್ಧಾರಕ್ಕೆ ದುಡಿದ, ವಿಶ್ವಬಂಧು ವಿಶ್ವಮಾನವ ಪುಣ್ಯಮೂರ್ತಿ–ಎಂದು
ಆಶೀರ್ವಚನ ಮಾಡಿದರು ಅಧ್ಯಕ್ಷ ಪೀಠದ ಪರಮಪೂಜ್ಯ ಶ್ರೀ ಶ್ರೀ ಗಳವರು.

ರಾತ್ರಿ ಹತ್ತುಘಂಟೆಗೆ ' ಜಗಜ್ಯೋತಿ ಬಸವೇಶ್ವರ '–ನಾಟಕ ಪ್ರದರ್ಶನ.
ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿ, ಶ್ರೀ ಸಿದ್ಧಗಂಗಾ ಮಠದವರಿಂದ. ಬೆಳ್ಳಂ
ಬೆಳಗಿನವರೆಗೆ ಕಲ್ಯಾಣಪಟ್ಟಣದಲ್ಲಿದ್ದ ಅನುಭವ ಪ್ರೇಕ್ಷಕರಿಗೆ. " ನಾಟಕದ ಎಲ್ಲಾ
ಸಾಮಾನೂ ಸ್ವಾಮಿಗಳದೇ ಅಂತೇ "-ಮಾತುಕೇಳಿ ಬಂದಿತು ನಿಂತು ನಾಟಕ ನೋ
ಡುತ್ತಿದ್ದ ಮಂದಿ ಮಧ್ಯದಲ್ಲಿ. ಎಷ್ಟೊಂದು ಸಾವಿರ ಖರ್ಚುಮಾಡಿದ್ದಾರೆ ಸ್ವಾಮಿಗಳು
ಎಂದರು ಇನ್ನೊಬ್ಬರು, " ಇನ್ನಾದರು ಜನಅರ್ಥ ಮಾಡಿಕೊಂಡರೆ ಸಾಕು ಅಲ್ವಾ ".
" ಸ್ವಾಮಿಗಳು ನಾಟಕದ ಮಕ್ಕಳನ್ನೆಲ್ಲಾ ಹೂವು ನೋಡಿಕೊಂಡಹಾಗೆ ನೋಡಿಕೊಂಡಿ
ದ್ದಾರಪ್ಪ, ಆ ಮಕ್ಕಳ ಪುಣ್ಯದೊಡ್ಡದು " ಎಂದು ಹಿರಿಯಜ್ಜಿಯೊಬ್ಬಳು ಹೇಳಿದಾಗ
ವರದಿಗಾರನಿಗೆ ಕಣ್ಣಲ್ಲಿ ನೀರು ತುಂಬಿ ಬಂದಿತ್ತು. ನಾಟಕ ಮುಗಿದಾಗ ನೇಮಂಗ
ಲದ ಬದುಕಿಗೆ ಕಲ್ಯಾಣದ ಕೋಳಿಕೂಗಿ ಎಚ್ಚರ ನೀಡುತ್ತಿತ್ತು.

ಶ್ರದ್ಧಾಂಜಲಿ



ವಿದ್ವಾನ್ ಶ್ರೀ ಎಸ್. ಎಸ್. ಶಿವರುದ್ರಯ್ಯನವರು ದಿನಾಂಕ 20-5-1985 ರಂದು ಶಿವೈಕ್ಯರಾದರು ಎಂದು ತಿಳಿಸಲು ವಿಷಾಧಿಸುತ್ತೇವೆ. ಶ್ರೀಯುತರು ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಅಲಂಕಾರವಿಭಾಗ ದಲ್ಲಿ ಸುಮಾರು 20 ವರ್ಷಗಳಿಂದಲೂ ಉಪಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು. ಶ್ರೀ ಸಿದ್ಧಗಂಗಾ ಮಠದಲ್ಲಿ ಪ್ರಾಂಭದಿಂದಲೂ ಅಭ್ಯಾಸಮಾಡಿ ವಿದ್ವತ್ ಪದವಿಯನ್ನು ಪಡೆದರು. ಪೂಜ್ಯ ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರರಾಗಿ ಶ್ರೀ ಕ್ಷೇತ್ರದಲ್ಲಿಯೇ ಸೇವಾ ವೃತ್ತಿಯನ್ನು ಪ್ರಾರಂಭಿ
ಸಿದರು. ಪ್ರಾಮಾಣಿಕವಾಗಿ ಸೇವೆ ಸಲ್ಲಿಸಿ ವಿದ್ಯಾರ್ಥಿಗಳ ಪ್ರೀತಿ ಗೌರವಗಳನ್ನು
ಸಂಪಾದಿಸಿಕೊಂಡಿದ್ದರು. ಹಿಂದಿಯಲ್ಲಿ ರತ್ನ ಪದವಿಯನ್ನು ಪಡೆದವರಾಗಿದ್ದರು.
ತಕ್ಕಷ್ಟು ವೇದಾಧ್ಯಯನ ಮಾಡಿ ಧಾರ್ಮಿಕ ಕ್ರಿಯಾಚರಣೆಯಲ್ಲಿ ಸಕ್ರಿಯವಾಗಿ
ಭಾಗಿಗಳಾಗುತ್ತಿದ್ದರು. ಗುರುಹಿರಿಯರಲ್ಲಿ ಶ್ರದ್ಧಾಭಕ್ತಿಯುಳ್ಳ ಶ್ರೀಯುತರು ನಮ್ರ
ಆಚಾರಶೀಲರು. ಸರಳ ಜೀವಿಗಳು, ಮಿತವ್ಯಯಿ, ಸ್ವತಂತ್ರವಾಗಿ ಜೀವಿಸಬೇಕೆನ್ನುವ
ಒಳ್ಳೆಯ ಸಂಸಾರಿ ಮತ್ತು ಶ್ರಮಜೀವಿ. ಎಲ್ಲಕ್ಕಿಂತ ಮಿಗಿಲಾಗಿ ಅವರು ತಮ್ಮನ್ನು
ಶ್ರೀಮಠದ ದಾಸೋಹದಲ್ಲಿ ಅರ್ಪಿಸಿಕೊಂಡಿದ್ದರು. ಆ ಕಾರ್ಯದಲ್ಲಿ ಪೂಜ್ಯ
ಶ್ರೀ ಶ್ರೀ ಗಳವರ ಪೂರ್ಣ ಆಶೀರ್ವಾದಕ್ಕೆ ಪಾತ್ರರಾಗಿದ್ದರು. ವಿದ್ಯಾರ್ಥಿ
ಗಳಿಗೆ ಊಟ ಅಣಿ ಮಾಡಿಸುವುದು, ಊಟ ಬಡಿಸುವುದು, ಉಗ್ರಾಣದ ಮೇಲ್ವಿಚಾ
ರಣೆ. ಪ್ರಸಾದಕ್ಕೆ ಬಂದ ಭಕ್ತಾದಿಗಳಿಗೆ ಸಮಾಧಾನದಿಂದ ವಿತರಣೆ ಮಾಡಿಸುವುದು
ಇವರಿಗೆ ಇವುಗಳಲ್ಲಿದ್ದ ಸಹನೆ, ತಾಳ್ಮೆಗಳು ಶ್ರೀ ಶ್ರೀಗಳವರ ಮೆಚ್ಚಿಗೆಯನ್ನು ಸಂಪಾ
ದಿಸಿದ್ದುವು. ಶ್ರೀ ಮಠದಲ್ಲಿ ಮಾಡಿಸಿದ ಹಬ್ಬಗಳು ಮತ್ತು ವಿಶೇಷ ಉತ್ಸವಗಳಲ್ಲಿ ಪ್ರಾ
ರಂಭದಿಂದ ಕೊನೆಯವರೆಗೂ ಇದ್ದು ನಿಭಾಯಿಸುವ ಶಕ್ತಿಯನ್ನು ದೇವರು ಅವರಿಗೆ
ಕರುಣಿಸಿದ್ದ. ಶ್ರೀಯುತರು ಸುಮಾರು ಎರಡು ತಿಂಗಳುಗಳ ಕಾಲ ಅಸ್ವಸ್ಥರಾಗಿದ್ದು
ಆಸ್ಪತ್ರೆ ಸೇರಿದರು. ವಿಶೇಷ ಪ್ರಯತ್ನ ಮಾಡಿದರೂ ಪ್ರಯೋಜನವಾಗಲಿಲ್ಲ. ಒಬ್ಬ
ಪುತ್ರ ನಾಲ್ವರು ಪುತ್ರಿಯರು ಮತ್ತು ಪತ್ನಿಯನ್ನು ಬಿಟ್ಟು ದೈವಾಧೀನರಾದರು.
ಅವರ ಕುಟುಂಬವರ್ಗಕ್ಕೆ ದುಃಖವನ್ನು ಸಹಿಸುವ ಶಕ್ತಿಯನ್ನು ಮೃತರ ಆತ್ಮಕ್ಕೆ ಶಾಂತಿ
ಯನ್ನು ಪರಮಾತ್ಮನು ಕರುಣಿಸಲೆಂದು ಹಾರೈಸಿ ಸಿದ್ಧಗಂಗಾ ಪತ್ರಿಕೆಯು ಶ್ರದ್ಧಾಂ
ಜಲಿಯನ್ನು ಸಲ್ಲಿಸಿದೆ.

ಸಂ.

